(ಬಿ) "ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ" ಎಂದರೆ, ಈ ಅಧಿನಿಯಮದ ಧ್ಯೇಯೋದ್ದೇಶಗಳಿಗೆ ಅನುರೂಪವಾಗಿ ಸಂಶೋಧನೆ ಅನ್ವೇಷಣೆ ಮತ್ತು ಮೌಲ್ಯಮಾಪನದ ಹೊಣೆಯನ್ನು ಹೊಂದಿರುವ ವಿಶ್ವವಿದ್ಯಾಲಯದ ಕೇಂದ್ರ;

(ಸಿ) "ಅಧ್ಯಕ್ಷರು" ಎಂದರೆ, ವಿಶ್ವವಿದ್ಯಾಲಯದ ಸಂಬಂಧಿತ ಪ್ರಾಧಿಕಾರಗಳ ಅಥವಾ ಸಮಿತಿಗಳ ಅಧ್ಯಕ್ಷರು;

(ಡಿ) "ನಿರ್ದೇಶಕರು, ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ" ಎಂದರೆ, ಈ ಅಧಿನಿಯಮದಡಿಯಲ್ಲಿ ರಚಿಸಿರುವ ವಿನಿಯಮಗಳಿಗೆ ಅನುಸಾರವಾಗಿ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ ನಿರ್ದೇಶಕರೆಂದು ನೇಮಕಗೊಂಡ ನಿರ್ದೇಶಕರು;

(ಇ) "ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನದ ನಿರ್ದೇಶಕರು" ಎಂದರೆ, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರದ ನಿರ್ದೇಶಕರೆಂದು ನೇಮಕಗೊಂಡ ನಿರ್ದೇಶಕರು;

(ಎಫ್) "ಕಾರ್ಯನಿರ್ವಾಹಕ ಪರಿಷತ್ತು" ಎಂದರೆ, ವಿಶ್ವವಿದ್ಯಾಲಯದ ಕಾರ್ಯನಿರ್ವಾಹಕ ಪರಿಷತ್ತು;

(ಜಿ) "ವ್ಯಾಸಂಗ ವಿಭಾಗ ಪರಿಷತ್ತು" ಎಂದರೆ, ವ್ಯಾಸಂಗ ವಿಭಾಗದ ಸದಸ್ಯರು ಮತ್ತು ಎಲ್ಲಾ ಶಾಲೆಗಳ ಮುಖ್ಯಸ್ಥರ ಪರಿಷತ್ತು;

(ಹೆಚ್) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಐ) "ವಸತಿನಿಲಯ" ಎಂದರೆ, ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ವಿದ್ಯಾರ್ಥಿಗಳಿಗಾಗಿ ಇರುವ ವಿಶ್ವವಿದ್ಯಾಲಯದ ಅಥವಾ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ವಸತಿ ಘಟಕ;

(ಜೆ) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಿರುವ ವಿನಿಯಮಗಳು, ಪರ್ಯಾದೇಶಗಳು ಅಥವಾ ನಿಯಮಗಳ ಮೂಲಕ ನಿಯಮಿಸಲಾದುದು;

(ಕೆ) "ಕುಲಸಚಿವರು" ಎಂದರೆ, ವಿಶ್ವವಿದ್ಯಾಲಯದ ಕುಲಸಚಿವರು;

(ಎಲ್) "ವಿನಿಯಮಗಳು, ಪರ್ಯಾದೇಶಗಳು, ನಿಯಮಗಳು" ಎಂದರೆ, ಅನುಕ್ರಮವಾಗಿ ಈ ಅಧಿನಿಯಮದಡಿಯಲ್ಲಿ ರಚಿಸಿರುವ ವಿಶ್ವವಿದ್ಯಾಲಯದ ವಿನಿಯಮಗಳು, ಪರ್ಯಾದೇಶಗಳು, ನಿಯಮಗಳು;

(ಎಂ) "ಶಾಲೆ" ಎಂದರೆ, ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೋಮಾಗಳು, ಸರ್ಟಿಫಿಕೇಟ್‌ಗಳು ಮತ್ತು ಇತರ ಶೈಕ್ಷಣಿಕ ಪುರಸ್ಕಾರಗಳನ್ನು ಪ್ರದಾನ ಮಾಡಲು ಅನುವಾಗುವಂತೆ ಪರೀಕ್ಷೆಯ ಪ್ರವೇಶಾತಿಗಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್‌ನಲ್ಲಿನ ಅಧ್ಯಯನದ ಮತ್ತು ತರಬೇತಿಯ ಯಾವುದೇ ಕೋರ್ಸ್‌ನ್ನು ಒದಗಿಸುವ ವಿಶ್ವವಿದ್ಯಾಲಯದ ಒಂದು ಶಾಲೆ;

(ಎನ್) "ಕೃಷಿ ವ್ಯವಹಾರ ವ್ಯವಸ್ಥಾಪನೆ ಮತ್ತು ಗ್ರಾಮೀಣಾಭಿವೃದ್ಧಿ ವ್ಯವಸ್ಥಾಪನಾ ಶಾಲೆ" ಎಂದರೆ, ಕೃಷಿ ವ್ಯವಹಾರ ವ್ಯವಸ್ಥಾಪನೆ ಮತ್ತು ಗ್ರಾಮೀಣಾಭಿವೃದ್ಧಿ ವ್ಯವಸ್ಥಾಪನೆಯಲ್ಲಿ ಶಿಕ್ಷಣ ಮತ್ತು ಸಂಶೋಧನೆಯನ್ನು ಕೈಗೊಳ್ಳುವ ಹೊಣೆಗಾರಿಕೆಯನ್ನು ಹೊಂದಿರುವ ವಿಶ್ವವಿದ್ಯಾಲಯದ ಒಂದು ಶಾಲೆ;

(ಒ) "ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಶಾಲೆ" ಎಂದರೆ, ಪಂಚಾಯತ್ ರಾಜ್ ಸಂಸ್ಥೆಗಳು ಮತ್ತು ಗ್ರಾಮೀಣಾಭಿವೃದ್ಧಿಯನ್ನು ಬಲಪಡಿಸಲು ಶಿಕ್ಷಣ ಮತ್ತು ಸಂಶೋಧನೆಯನ್ನು ಕೈಗೊಳ್ಳುವ ಹೊಣೆಗಾರಿಕೆಯನ್ನು ಹೊಂದಿರುವ ವಿಶ್ವವಿದ್ಯಾಲಯದ ಒಂದು ಶಾಲೆ;

(ಪಿ) "ಪರಿಸರ ವಿಜ್ಞಾನ ಮತ್ತು ಸಾರ್ವಜನಿಕ ಆರೋಗ್ಯ ಹಾಗೂ ನೈರ್ಮಲ್ಯ ವ್ಯವಸ್ಥಾಪನಾ ಶಾಲೆ" ಎಂದರೆ, ಸರ್ವತೋಮುಖ ಗ್ರಾಮೀಣಾಭಿವೃದ್ಧಿಯ ಧ್ಯೇಯಗಳೊಂದಿಗೆ ಅನುರೂಪವಾಗಿರುವ ಪರಿಸರ ವಿಜ್ಞಾನ, ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯತೆಯಲ್ಲಿ ಅಧ್ಯಯನಗಳು, ಸಂಶೋಧನೆ ಮತ್ತು ಅನ್ವೇಷಣೆಯನ್ನು ಕೈಗೊಳ್ಳುವ ಹೊಣೆಗಾರಿಕೆಯನ್ನು ಹೊಂದಿರುವ ವಿಶ್ವವಿದ್ಯಾಲಯದ ಒಂದು ಶಾಲೆ;

(ಕ್ಯೂ) "ಸಾಮಾಜಿಕ ವಿಜ್ಞಾನ ಮತ್ತು ಗ್ರಾಮೀಣ ಪುನಾರಚನಾ ಶಾಲೆ" ಎಂದರೆ, ಗ್ರಾಮೀಣಾಭಿವೃದ್ಧಿ ಪ್ರಕ್ರಿಯೆಯಲ್ಲಿ ಅಡಕವಾಗಿರುವ ಸಾಮಾಜಿಕ ವಸ್ತು–ವಿಚಾರಗಳಲ್ಲಿ (issues) ಅಧ್ಯಯನ, ಸಂಶೋಧನೆ ಮತ್ತು ಅನ್ವೇಷಣೆಯನ್ನು ಕೈಗೊಳ್ಳುವ ಹೊಣೆಗಾರಿಕೆಯನ್ನು ಹೊಂದಿರುವ ವಿಶ್ವವಿದ್ಯಾಲಯದ ಒಂದು ಶಾಲೆ;

(ಆರ್) "ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿ ಶಾಲೆ" ಎಂದರೆ, ಧ್ಯೇಯ (ಉದ್ದೇಶಿತ) ಸಮೂಹಗಳನ್ನು (target groups) ಅಗತ್ಯ ಕೌಶಲ್ಯಗಳೊಂದಿಗೆ ಉದ್ಯಮಶೀಲತೆಯ ಸಾಮರ್ಥ್ಯಗಳನ್ನು ಪಡೆಯುವುದಕ್ಕಾಗಿ ಸಜ್ಜುಗೊಳಿಸಿ ಸಮರ್ಥಗೊಳಿಸುವುದಕ್ಕೆ, ಉದ್ದೇಶಿತ ಸಮೂಹಗಳಿಗೆ ವೈಜ್ಞಾನಿಕ ಪ್ರಗತಿಗಳ ಪ್ರಯೋಜನಗಳನ್ನು ತಲುಪಿಸಲು, ಅವರುಗಳ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಲು, ಸಾಮರ್ಥ್ಯಗಳನ್ನು ಗುರುತಿಸಲು ಮತ್ತು ಅವರುಗಳನ್ನು ಉತ್ತೇಜಿಸಲು ಹಾಗೂ ಸಮರ್ಥ ಉದ್ಯಮಶೀಲರಿಗೆ ಸಹಾಯಹಸ್ತವನ್ನು ನೀಡುವ ಹೊಣೆಗಾರಿಕೆಯನ್ನು ಹೊಂದಿರುವ ವಿಶ್ವವಿದ್ಯಾಲಯದ ಒಂದು ಶಾಲೆ;

(ಎಸ್) "ವಿಶ್ವವಿದ್ಯಾಲಯ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ನಿಗಮಿತವಾಗಿರುವ ಕರ್ನಾಟಕ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯ;

(ಟಿ) "ಕುಲಪತಿಗಳು" ಎಂದರೆ, ವಿಶ್ವವಿದ್ಯಾಲಯದ ಕುಲಪತಿಗಳು.

## ಅಧ್ಯಾಯ-II

## ವಿಶ್ವವಿದ್ಯಾಲಯ

**3. ವಿಶ್ವವಿದ್ಯಾಲಯದ ಸ್ಥಾಪನೆ ಮತ್ತು ನಿಗಮನ.**- (1) 4ನೇ ಪ್ರಕರಣದಲ್ಲಿ ನಿರೂಪಿಸಿರುವ ದೃಷ್ಟಿ, ಗುರಿ (mission) ಮತ್ತು ಧ್ಯೇಯೋದ್ದೇಶಗಳ ಸಾಧನೆಗಾಗಿ ಮತ್ತು ಮುಂದುವರಿಕೆಗಾಗಿ ಏಕಾತ್ಮಕವಾದ **"ಕರ್ನಾಟಕ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯ"** ವನ್ನು ಸ್ಥಾಪಿಸತಕ್ಕದ್ದು.

(2) ವಿಶ್ವವಿದ್ಯಾಲಯವು ಶಾಶ್ವತ ಉತ್ತರಾಧಿಕಾರ ಹಾಗೂ ಸಾಮಾನ್ಯ ಮೊಹರನ್ನು ಹೊಂದಿರುವ ಚರ ಹಾಗೂ ಸ್ಥಿರ ಸ್ವತ್ತುಗಳೆರಡನ್ನೂ ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಅಧಿಕಾರ ಹೊಂದಿರತಕ್ಕ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಅದು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೊಳಗಾಗತಕ್ಕದ್ದು.

(3) ವಿಶ್ವವಿದ್ಯಾಲಯದ ಕೇಂದ್ರ ಕಾರ್ಯಸ್ಥಾನವು **ಗದಗದಲ್ಲಿ ಇರತಕ್ಕದ್ದು** ಅದು ರಾಜ್ಯದೊಳಗೆ ಸೂಕ್ತವೆಂದು ಭಾವಿಸಬಹುದಾದಂಥ ಇತರ ಸ್ಥಳಗಳಲ್ಲಿ ಸರ್ಕಾರದ ಪೂರ್ವಾನುಮತಿಯೊಂದಿಗೆ ಪ್ರಾದೇಶಿಕ ಕೇಂದ್ರಗಳನ್ನು ಸ್ಥಾಪಿಸಿರತಕ್ಕದ್ದು.

**4. ವಿಶ್ವವಿದ್ಯಾಲಯದ ದೃಷ್ಟಿ, ಗುರಿ ಮತ್ತು ಧ್ಯೇಯೋದ್ದೇಶಗಳು.**- (1) ವಿಶ್ವವಿದ್ಯಾಲಯದ ದೃಷ್ಟಿಯು ಸುಸ್ಥಿರ ಗ್ರಾಮೀಣಾಭಿವೃದ್ಧಿ ಹಾಗೂ ಗ್ರಾಮೀಣ ಜನತೆಯ ಜೀವನ ಗುಣಮಟ್ಟವನ್ನು ವಿಶಾಲ ಹರವಿನ ಸುಧಾರಣೆಯನ್ನು ಖಚಿತಪಡಿಸುವ ಗ್ರಾಮೀಣಾಭಿವೃದ್ಧಿ ಪ್ರಕ್ರಿಯೆಯಲ್ಲಿ ಭಾಗಿಯಾಗುವಂತಹ ಸಮರ್ಪಣಾ ಮನೋಭಾವದ, ಬದ್ಧತೆಯುಳ್ಳ, ಮಾನವ ಸಂಪನ್ಮೂಲವನ್ನು ಸೃಜಿಸುವ ಮೂಲಕ ಗ್ರಾಮೀಣ ಸಮಾಜವನ್ನು ಉತ್ಕೃಷ್ಟ ಕೇಂದ್ರವಾಗಿಸಲು ಕಾರ್ಯಮಗ್ನವಾಗುವುದು.

(2) ವಿಶ್ವವಿದ್ಯಾಲಯದ ಗುರಿಯು ಬಡತನವನ್ನು ಕಡಿಮೆ ಮಾಡಿ ಉದ್ಯೋಗಾವಕಾಶಗಳನ್ನು ಸೃಷ್ಟಿಸಿ ಜನರು ತಮ್ಮದೇ ಆದ ಕ್ಷೇಮಾಭಿವೃದ್ಧಿ, ಆರ್ಥಿಕ ಮತ್ತು ಸಾಮಾಜೋ – ರಾಜಕೀಯ ಪ್ರಗತಿಗೆ ನಿರ್ಧಾರಗಳನ್ನು ತೆಗೆದುಕೊಳ್ಳುವಂತಹ ಪಂಚಾಯತ್ ರಾಜ್ ಸಂಸ್ಥೆಗಳ ಪ್ರಜಾಪ್ರಭುತ್ವ ವ್ಯವಸ್ಥೆಯ ಮೂಲಕ ಅಂತರ್ಗತ ಬೆಳವಣಿಗೆಗೆ ಕಾರಣವಾಗುವ ಆರೋಗ್ಯ, ಶಿಕ್ಷಣ ಮತ್ತು ಕೌಶಲಾಭಿವೃದ್ಧಿಗಳಲ್ಲಿ ಅಗತ್ಯ ಸೇವೆಗಳನ್ನು ನೀಡಲು ಅವಕಾಶವೀಯುವ ತ್ವರಿತ ಆರ್ಥಿಕ ಬೆಳವಣಿಗೆ ಮತ್ತು ಸುಸ್ಥಿರ ಅಭಿವೃದ್ಧಿಗಾಗಿ ವಿವಿಧ ಪಾಲುದಾರರಿಗೆ ಶಿಕ್ಷಣ ಮತ್ತು ತರಬೇತಿ ನೀಡುವುದು.

(3) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು ಈ ಕೆಳಕಂಡಂತಿವೆ, ಎಂದರೆ:-

(i) ಬೋಧನೆ, ಕಲಿಕೆ ಮತ್ತು ಸಂಶೋಧನೆಯಲ್ಲಿ ಉತ್ಕೃಷ್ಟತೆಯೆಡೆಗೆ ಸತತ ಗಮನವನ್ನು ನೀಡುವುದು;

(ii) ಬೆಳವಣಿಗೆ ಮತ್ತು ಸಮಗ್ರ ಗ್ರಾಮೀಣಾಭಿವೃದ್ಧಿ ಮುಖಾಂತರ ಗ್ರಾಮೀಣ ಪ್ರದೇಶಗಳ ಸುಧಾರಣೆಗಾಗಿ ಉದ್ಭವಿಸುವ ಸವಾಲುಗಳನ್ನು ಕೈಗೆತ್ತಿಕೊಂಡು ತಂತ್ರಜ್ಞಾನ ವ್ಯವಸ್ಥಾಪನಾ ಶ್ರೇಣಿಯನ್ನು ಅಭಿವೃದ್ಧಿಪಡಿಸಲು ಉನ್ನತ ಶಿಕ್ಷಣವನ್ನು ರೂಪಿಸಿ, ಪ್ರೋತ್ಸಾಹಿಸಿ ಬೋಧಿಸುವುದು;

(iii) ಗ್ರಾಮೀಣಾಭಿವೃದ್ಧಿಯ ಸಂಕೀರ್ಣ ಮತ್ತು ವಿಭಿನ್ನ ವಿಚಾರಗಳಿಗೆ ಪರಿಹಾರಗಳನ್ನು ವಿನ್ಯಾಸಗೊಳಿಸಲು ಅಂತರ್ ವಿಷಯ (inter disciplinary) ಮತ್ತು ಸಮಗ್ರ ಬುನಾದಿಯ ಮೇಲೆ ಡಾಕ್ಟರೇಟ್, ಪೋಸ್ಟ್ ಡಾಕ್ಟರೇಟ್, ಸ್ನಾತಕೋತ್ತರ, ಸ್ನಾತಕ, ಡಿಪ್ಲೋಮಾ ಮತ್ತು ಸರ್ಟಿಫಿಕೇಟ್ ಪದವಿಗಳನ್ನು ಪ್ರದಾನ ಮಾಡಲು ಅನುವಾಗುವ ಕೋರ್ಸ್‌ಗಳನ್ನು ಆರಂಭಿಸುವುದು;

(iv) ಉದ್ಯೋಗಾವಕಾಶಗಳಿಗೆ ಹೆಚ್ಚು ಆಸ್ಪದವೀಯುವಂತಹ ಕೌಶಲ್ಯಾಭಿವೃದ್ಧಿಗೆ ಒತ್ತು ನೀಡುವ ವ್ಯಾಸಂಗ ಕ್ರಮಗಳ ಜಾರಿಗಾಗಿ ಪ್ರತಿಯೊಂದು ಪ್ರದೇಶದಲ್ಲಿ (region) ಗ್ರಾಮೀಣಾಭಿವೃದ್ಧಿಯ ಪ್ರಾದೇಶಿಕ ಕೇಂದ್ರಗಳನ್ನು ಸ್ಥಾಪಿಸುವುದು;

(v) ಸಂಪರ್ಕ ಮೂಲಗಳನ್ನು ಎಂದರೆ, ಪ್ರಗತಿಪರ ರೈತರು, ಕೈಗಾರಿಕೋದ್ಯಮ (Industry houses) ಇತ್ಯಾದಿ ಬಳಸಿಕೊಂಡು ಕಲಿಕಾ ಕೇಂದ್ರವನ್ನು ಸ್ಥಾಪಿಸುವುದು. ಗ್ರಾಮೀಣ ಜನರು, ಗ್ರಾಮ ಪಂಚಾಯತಿಗಳು, ತಾಲ್ಲೂಕು ಪಂಚಾಯತಿಗಳು, ಜಿಲ್ಲಾ ಪಂಚಾಯತಿಗಳು, ಮುಂತಾದವುಗಳು ನಡೆದು ಬಂದ ಹಾದಿ (track record) ಗಮನಿಸಿ ಗ್ರಾಮೀಣಾಭಿವೃದ್ಧಿಯ ಆಯ್ದ ಚಟುವಟಿಕೆಗಳ ಕುರಿತಾಗಿ ಮಾದರಿ (ಪೈಲೆಟ್) ಪ್ರಾತ್ಯಕ್ಷಿಕಾ ಘಟಕಗಳನ್ನು ಸ್ಥಾಪಿಸುವುದು ಹಾಗೆಯೇ, ತಂತ್ರಜ್ಞಾನ ಪಾರ್ಕ್ ಮತ್ತು ಜೈವಿಕ ಗ್ರಾಮ ಸಂಪನ್ಮೂಲ ಕಲಿಕಾ ಕೇಂದ್ರಗಳನ್ನು ಸಹ ಸ್ಥಾಪಿಸುವುದು;

(vi) ಗ್ರಾಮೀಣಾಭಿವೃದ್ಧಿಯ ವಿಶೇಷ ವಿಷಯಗಳ ಕುರಿತಾಗಿ ಎಂದರೆ, ಸಾಮಾಜಿಕ ಸಂಪ್ರದಾಯಗಳು, ಕುಡಿಯುವ ನೀರು, ಜೈವಿಕ ಉರುವಲು ಮತ್ತು ಇಂಧನ, ಆಹಾರ ಮತ್ತು ಪೌಷ್ಠಿಕಾಂಶ, ಮೌಲಿಕ ಕೊಂಡಿ, ಕೌಶಲ್ಯತೆ ಮತ್ತು ಸರಕು ತಯಾರಿಕಾ ಘಟಕಗಳು, ಪ್ಯಾಕೇಜಿಂಗ್, ಬ್ರಾಂಡಿಂಗ್ ಮತ್ತು ಮಾರುಕಟ್ಟೆ, ಅಗತ್ಯ ನಗರ

ಸೇವೆಗಳ ಕಾರ್ಯಜಾಲ (Network) ಹಾಗೂ ಗ್ರಾಮೀಣ ಬ್ರಾಡ್‌ಬಾಂಡ್ ಆನ್‌ಲೈನ್ ಆಂಶಗಳ ಮೂಲಕ ಅವುಗಳಿಗೆ ಅನುಕೂಲ ಕಲ್ಪಿಸುವುದು, ಇತ್ಯಾದಿಗಳ ಬಗೆಗೆ ಪೀಠಗಳನ್ನು ಮತ್ತು ಅಧ್ಯಯನ ಸಂಸ್ಥೆಗಳನ್ನು ಸ್ಥಾಪಿಸುವುದು;

(vii) ಗ್ರಾಮೀಣಾಭಿವೃದ್ಧಿಗೆ ಸಹಕರಿಸಲು ಹಾಗೂ ಜನರ ಗ್ರಾಮೀಣ ಪ್ರಜ್ಞಾವಂತಿಕೆ ಮತ್ತು ಅನುಭವವನ್ನು ಶ್ರೀಮಂತಗೊಳಿಸಲು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಸಂಸ್ಥೆಗಳಿಂದ ಅತಿಥಿ ಉಪನ್ಯಾಸಕರನ್ನು ಅಹ್ವಾನಿಸುವುದು;

(viii) ಸರ್ಕಾರಿ ಇಲಾಖೆಗಳಲ್ಲಿ ಹೊಸದಾಗಿ ನೇಮಕಗೊಂಡವರಿಗೆ ಪರಿಚಯ ಅಭಿವಿನ್ಯಾಸ (orientation) ಕಾರ್ಯಕ್ರಮ, ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ ಕಾರ್ಯನಿರತರಾದವರಿಗೆ ರಾಜ್ಯ ಸರ್ಕಾರದ ಸಹಯೋಗದಲ್ಲಿ ತರಬೇತಿ ಕಾರ್ಯಕ್ರಮ, ಸರ್ಕಾರಿ ಇಲಾಖೆಗಳ ಅಧಿಕಾರಿಗಳಿಗೆ ಮತ್ತು ಸಿಬ್ಬಂದಿಗಳಿಗೆ ಪುನಶ್ಚೇತನ ಕಾರ್ಯಕ್ರಮ ಹಾಗೂ ವಿವಿಧ ಪ್ರಜಾತಾಂತ್ರಿಕ ಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳಿಗೆ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸುವುದು;

(ix) ಗ್ರಾಮೀಣಾಭಿವೃದ್ಧಿ ಅಧ್ಯಯನ ಮತ್ತು ಕಾರ್ಯಕ್ರಮಗಳ ಭವಿಷ್ಯದ ಯೋಜನೆಗಾಗಿ ಮತ್ತು ಸುಧಾರಣೆಗಾಗಿ ಗ್ರಾಮೀಣಾಭಿವೃದ್ಧಿಯಲ್ಲಿ ಸಮಕಾಲೀನ ಜ್ಞಾನವನ್ನು ಮೂಡಿಸುವ ಸಲುವಾಗಿ ಪ್ರಚಲಿತ ಸಂಗತಿಗಳನ್ನು ಆಧರಿಸಿ ವಾರ್ಷಿಕವಾಗಿ ಸಮಾವೇಶ, ಕಾರ್ಯಾಗಾರ, ವಿಚಾರ ಸಂಕೀರ್ಣ ಮುಂತಾದುವುಗಳನ್ನು ಏರ್ಪಡಿಸುವುದು;

(x) ಅಂತರರಾಷ್ಟ್ರೀಯ, ರಾಷ್ಟ್ರೀಯ ಹಾಗೂ ಪ್ರಾದೇಶಿಕ ಸಂಸ್ಥೆಗಳನ್ನು, ವಿಶ್ವವಿದ್ಯಾಲಯ ಹಾಗೂ ಇತರ ಸಂಘ– ಸಂಸ್ಥೆಗಳ ಸಹಭಾಗಿತ್ವದ ಕಾರ್ಯಜಾಲದ ಮೂಲಕ ವಿಶ್ವವಿದ್ಯಾಲಯದ ಬೋಧಕರು, ವಿದ್ಯಾರ್ಥಿಗಳು ಮತ್ತು ಗ್ರಾಮೀಣ ಸಮುದಾಯದವರನ್ನು ಸೇರಿಸಿಕೊಂಡು ಗ್ರಾಮೀಣಾಭಿವೃದ್ಧಿಯ ಎಲ್ಲಾ ಮಜಲುಗಳ ಕುರಿತು ಮೂಲಭೂತ, ಅನ್ವಯಿಕ ಮತ್ತು ತಂತ್ರಕುಶಲದಲ್ಲಿ ಪ್ರವೃತ್ತವಾದ ಸಂಶೋಧನೆಯನ್ನು ಕೈಗೊಳ್ಳುವುದು;

(xi) ವಿಜ್ಞಾನ ಮತ್ತು ತಂತ್ರಜ್ಞಾನದ ಅಗತ್ಯಗಳಿಂದ ಗ್ರಾಮೀಣ ವಲಯದ ಸಮಸ್ಯೆಗಳನ್ನು ಗುರುತಿಸುವುದು ಮತ್ತು ಈ ವಿಶ್ವವಿದ್ಯಾಲಯದ ಬೋಧಕವರ್ಗ ಮತ್ತು ವಿದ್ಯಾರ್ಥಿಗಳು ಹಾಗೂ ಗ್ರಾಮೀಣ ಸಮುದಾಯವನ್ನು ಒಳಗೊಂಡ ಸುಸ್ಥಿರ ಅಭಿವೃದ್ಧಿಯ ನಿದರ್ಶನದೊಳಗೆ ಅವುಗಳನ್ನು ಬಗೆಹರಿಸುವುದು;

(xii) ಗ್ರಾಮೀಣ ಸಮಾಜವನ್ನು ಬಾಧಿಸುವಂತಹ ವಿವಿಧ ಪ್ರಖರತೆಯ ಸಂಭಾವ್ಯ ವಿಪತ್ತುಗಳನ್ನು ಕುರಿತು ಆಳವಾದ ಸಂಶೋಧನೆ ಮಾಡಿ ಈ ಎಲ್ಲಾ ಬಗೆಯ ಹಾನಿ ಮತ್ತು ವಿಪತ್ತುಗಳನ್ನು ತಪ್ಪಿಸುವುದಕ್ಕಾಗಿ ಹಾಗೂ ಅವುಗಳ ಶಮನಕ್ಕೆ ಮಾರ್ಗೋಪಾಯಗಳನ್ನು ರೂಪಿಸುವುದು;

(xiii) ಸಮಗ್ರ ಗ್ರಾಮೀಣ ಅಭಿವೃದ್ಧಿಯೆಡಗೆ ಕಾರ್ಯನಿರ್ವಹಿಸಲು ಆಧುನಿಕ ಮಾಹಿತಿ, ಸಂಪರ್ಕ ತಂತ್ರಜ್ಞಾನಗಳನ್ನು ಬಳಸಿ ವಿಸ್ತರಣೆ, ಕೌಶಲ್ಯತೆ ಮತ್ತು ಉದ್ಯಮಶೀಲತೆಗಾಗಿ ಈ ವಿಶ್ವವಿದ್ಯಾಲಯವು ಉತ್ಕೃಷ್ಟ ಕೇಂದ್ರವಾಗಿ ಕಾರ್ಯ ಪ್ರವೃತ್ತರಾಗುವಂತೆ ಮಾಡುವುದು;

(xiv) ನಾಲ್ಕು ಪ್ರಕಾರದ ಮಾಹಿತಿಗಳನ್ನೊಳಗೊಂಡ ಎಂದರೆ, ವೈಜ್ಞಾನಿಕ ಸಂಸ್ಥೆಗಳ ನಡುವಣ ಒಕ್ಕೂಟ (ಪ್ರಯೋಗಾಲಯದಿಂದ ಪ್ರಯೋಗಾಲಯಕ್ಕೆ), ಸಂಸ್ಥೆ ಮತ್ತು ಬಳಕೆದಾರರ ನಡುವೆ (ಪ್ರಯೋಗಾಲಯದಿಂದ ಭೂಮಿಗೆ), ಗ್ರಾಮೀಣ ಪಾರಂಪರಿಕ ಜ್ಞಾನ ನೆಲೆಯಿಂದ ತಾಂತ್ರಿಕ ಪರಿಣಿತರ ನಡುವೆ (ಭೂಮಿಯಿಂದ ಪ್ರಯೋಗಾಲಯಕ್ಕೆ) ಹಾಗೂ ಗ್ರಾಮೀಣ ಕುಟುಂಬಗಳ ನಡುವೆ ಪಾರ್ಶ್ವಿಕ ಕಲಿಕೆ (ಭೂಮಿಯಿಂದ ಭೂಮಿಗೆ) ನೈಜ ಅಕಾಡೆಮಿಯನ್ನು ವಿನ್ಯಾಸಿಸಿ ಚಾಲನೆ ನೀಡುವುದು;

(xv) ಅತಿ ಹಿಂದುಳಿದ ಪ್ರದೇಶ ಅಥವಾ ಗ್ರಾಮ ಅಥವಾ ಸಮುದಾಯಗಳ ಮೇಲೆ ವಿಶೇಷ ಆಸಕ್ತಿ ವಹಿಸುವ ಜೊತೆಗೆ, ಉದ್ಯಮಶೀಲತೆಗೆ ದಾರಿ ಮಾಡಿಕೊಡುವ ಪ್ರಾದೇಶಿಕ, ಗ್ರಾಮ ಮತ್ತು ಸಮುದಾಯದಲ್ಲಿನ ಯುವಜನರಲ್ಲಿ ನಾಯಕತ್ವ ಮತ್ತು ವ್ಯವಸ್ಥಾಪನಾ ಕೌಶಲ್ಯವನ್ನು ಬೆಳೆಸಿ – ಉಳಿಸಲು ನೆರವಾಗುವಂತಹ ವಿಶೇಷ ಸಾಂಸ್ಥಿಕ ಸಂರಚನೆ ಮತ್ತು ಯೋಜನೆಗಳನ್ನು ಸೃಜಿಸುವುದು;

(xvi) ಗಾಂಧೀಜಿಯವರ ಚಿಂತನೆ (ಗ್ರಾಮ ಸ್ವರಾಜ್) ಆಧರಿಸಿ, ಸಮಗ್ರ ಮತ್ತು ಸುಸ್ಥಿರ ಗ್ರಾಮೀಣಾಭಿವೃದ್ಧಿ ಗುರಿ ಸಾಧಿಸಲು ವರ್ಗರಹಿತ, ಜಾತಿರಹಿತ ಹಾಗೂ ಜನಾಂಗರಹಿತ ಸಮಾಜವನ್ನು ಪ್ರವರ್ತಿಸುವ ಮುಖಾಂತರ ಸೇವೆಯನ್ನು ಒದಗಿಸಲು, ಉದ್ಯೋಗ ಮತ್ತು ಸಂಪತ್ತಿನ ಸೃಜನೆಯೆಡೆಗೆ ಕೊಂಡೊಯ್ಯಲು ಅಗತ್ಯವಿರುವ ಕಲಿಕಾ ಶಿಸ್ತು ಪ್ರಕಾರಗಳಲ್ಲಿ ಉದ್ಯಮಶೀಲತೆ ಅಭಿವೃದ್ಧಿಗಾಗಿ ತರಬೇತಿ, ಕೌಶಲ್ಯ ಮತ್ತು ವಿಶೇಷ ಪೋಷಣಾ ಸೌಕರ್ಯಗಳ ಪೂರೈಕೆಗಾಗಿ ಸರ್ವತೋಮುಖ ಅವಕಾಶಗಳನ್ನು ಒದಗಿಸುವುದು;

(xvii) ಸಾಮಾನ್ಯ ಗ್ರಾಮ ಸಂಪನ್ಮೂಲ ಮತ್ತು ಸೇವಾ ಕೇಂದ್ರಗಳ ಮೂಲಕ ದುರ್ಬಲ ವರ್ಗದವರಿಗೆ, ಮಕ್ಕಳು, ಸ್ತ್ರೀಯರು, ಹಿರಿಯ ನಾಗರೀಕರು ಮತ್ತು ವಿಕಲಚೇತನರಿಗೆ ಗ್ರಾಮ ಸೇವೆಗಳಿಗೆ ಅನುಕೂಲ

ಮಾಡಿಕೊಡುವುದು ಹಾಗೂ ಸಮಾಜದಲ್ಲಿ ಸಾಧ್ಯವಾಗುವ ಸಾಮಾಜಿಕ ನ್ಯಾಯ ಮತ್ತು ನ್ಯಾಯಸಮ್ಮತ ಸ್ಥಾನಮಾನವನ್ನು ಉತ್ತೇಜಿಸುವುದು.;

(xviii) ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಏಳಿಗೆಗಾಗಿ ತೀರ್ಮಾನ ಕೈಗೊಳ್ಳುವ ಸ್ವಾಯತ್ತತೆ ಮತ್ತು ಅವರನ್ನು ಜ್ಞಾನ ಮತ್ತು ಸಂಪನ್ಮೂಲಗಳಿಗೆ ಉತ್ತಮ ಪ್ರವೇಶ ನೀಡಿ ಸಜ್ಜುಗೊಳಿಸುವ ಮೂಲಕ ಮಹಿಳಾ ಸಬಲೀಕರಣವನ್ನು ಉತ್ತೇಜಿಸುವುದು;

(xix) ಪಾರಂಪರಿಕ ಜ್ಞಾನದೊಂದಿಗೆ ಸೂಕ್ತ ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಸಮೀಕರಿಸುವ ಮೂಲಕ ಸುಸ್ಥಿರ ತಂತ್ರಜ್ಞಾನ ಅಡಿಪಾಯ ಸೃಜಿಸುವ ಮೂಲಕ ಗ್ರಾಮೀಣ ಸಮಾಜದ ಸಾಂಸ್ಕೃತಿಕ ಸಂಪತ್ತು ಮತ್ತು ಪ್ರಾಯೋಗಿಕ ಜಾಣ್ಮೆಯನ್ನು ಸಂರಕ್ಷಿಸಿ ಶ್ರೀಮಂತಗೊಳಿಸುವುದು;

(xx) ಸಮಗ್ರ ಕೃಷಿ ಮಾರ್ಗ (ಕೃಷಿ, ಪಶುಸಂಗೋಪನೆ, ತೋಟಗಾರಿಕೆ, ವೃಕ್ಷ ಕೃಷಿ, ರೇಷ್ಮೆ ಕೃಷಿ ಇತ್ಯಾದಿಗಳು) ಅಳವಡಿಕೆ, ಸಂಸ್ಕರಣೆ ಮೌಲ್ಯ ಸೇರ್ಪಡೆ (ಪೂರಕ ಕೃಷಿ) ಹಾಗೂ ಕೃಷಿಕರ ಉತ್ಪಾದನೆ ಮತ್ತು ಉತ್ಪನ್ನಗಳನ್ನು ಬಹುಹಂತಗಳ ಮಾರುಕಟ್ಟೆಗಳೊಂದಿಗೆ ಜೋಡಿಸುವ ಮೂಲಕ ಪ್ರಕೃತಿದತ್ತ ಸಂಪನ್ಮೂಲಗಳನ್ನು ನ್ಯಾಯಯುತವಾಗಿ ಬಳಸಿ ಕೃಷಿ ಆರ್ಥಿಕತೆಯನ್ನು ಉತ್ತಮಗೊಳಿಸುವುದು;

(xxi) ನಿಸರ್ಗದತ್ತ ಸಂಪನ್ಮೂಲಗಳ ವಿವೇಕಯುತ ನಿರ್ವಹಣೆಯ ಗುರಿಯೊಂದಿಗೆ ಸಮುದಾಯಿಕ ಭಾಗೀದಾರಿಕೆ ಮತ್ತು ನಿರ್ವಹಣೆಯ ಮುಖಾಂತರ ಜೈವಿಕ ವೈವಿಧ್ಯತೆಯ ಸಂರಕ್ಷಣೆ, ಭೂಫಲವತ್ತತೆ ಮತ್ತು ನವೀಕರಿಸಬಹುದಾದ ಇಂಧನ ವ್ಯವಸ್ಥಾಪನೆ, ಬೀಜ ನಿಧಿ, ರೂಢಿಗತ ಬಾಡಿಗೆ ಸೇವೆಗಳು, ಸಾವಯವ ಕೃಷಿ, ಅರಣ್ಯಕೃಷಿ, ಮೇವು ಬ್ಯಾಂಕ್‌ಗಳು, ಸಾಂಪ್ರದಾಯಿಕ ಗಿಡಮೂಲಿಕಾ ಔಷಧಗಳು, ಆರೋಗ್ಯ ಮತ್ತು ಪೌಷ್ಠಿಕಾಂಶ ರೂಪ, ಗ್ರಾಮೀಣ ಉದ್ಯಮಗಳು ಮತ್ತು ಮಾರುಕಟ್ಟೆಗಳಿಗಾಗಿ ಜೈವಿಕ ಸಂಪನ್ಮೂಲ ಕೇಂದ್ರಗಳನ್ನು ಸ್ಥಾಪಿಸಲು ಉತ್ತೇಜಿಸುವುದು;

(xxii) ಗ್ರಾಮೀಣ ಆರ್ಥಿಕ ಸಮೃದ್ಧಿ ಮತ್ತು ಸುಧಾರಿತ ಜೀವನ ಗುಣಮಟ್ಟದೆಡೆಗೆ ಕೊಂಡೊಯ್ಯುವ ಗ್ರಾಮೀಣ – ನಗರ ಪ್ರತ್ಯೇಕತೆಯನ್ನು ತೊಡೆದು ಹಾಕಿ ಉತ್ತಮ ಬಾಂಧವ್ಯ ಸೃಜಿಸುವಂತಹ ನಗರ ಕೇಂದ್ರಿತ ಗ್ರಾಮೀಣ ಸೇವೆ, ಪರಿಸರ ಪ್ರವಾಸೋದ್ಯಮ ಮುಂತಾದುವುಗಳನ್ನು ಉತ್ತೇಜಿಸುವುದು;

(xxiii) ನಗರದ ಜನತೆಯೊಂದಿಗಿನ ಅಂತರವನ್ನು ತಗ್ಗಿಸಲು (ಕೃಷಿ, ಕೃಷಿಯೇತರ ಮತ್ತು ಕೃಷಿರಹಿತ ಉದ್ಯಮಗಳನ್ನು) ಗ್ರಾಮೀಣ ಸಮೂಹಗಳ ಉದ್ಯೋಗಾವಕಾಶ ಮತ್ತು ಆದಾಯ ಹೆಚ್ಚಿಸುವುದಕ್ಕಾಗಿ ಮಾದರಿ (ಪೈಲಟ್) ಆಧಾರದಲ್ಲಿ ಗ್ರಾಮೀಣ ಕುಟುಂಬ, ಸಮುದಾಯ, ಗ್ರಾಮ ಮತ್ತು ಪಂಚಾಯತ್ ಮಟ್ಟಗಳಲ್ಲಿ ಯೋಜನೆಗಳನ್ನು ವಿನ್ಯಾಸಗೊಳಿಸಿ ಅಭಿವೃದ್ಧಿಪಡಿಸುವುದು;

(xxiv) ಪರಿಣಾಮಕಾರಿ ತಂತ್ರಜ್ಞಾನಗಳ ನೆರವಿನಿಂದ ಕಿರು ಹಣಕಾಸು ಮತ್ತು ಕಿರು ಉದ್ಯಮಗಳ ಮೂಲಕ ಗ್ರಾಮೀಣ ಸಮೂಹಗಳಿಗೆ ಶಿಕ್ಷಣ ನೀಡುವುದರೊಂದಿಗೆ ಆರ್ಥಿಕಾಭಿವೃದ್ಧಿ ಮತ್ತು ಬಡತನ ನಿರ್ಮೂಲನೆ ಮಾಡುವುದು;

(xxv) ಅಂತರ್ಗತ ಬೆಳವಣಿಗೆಯನ್ನು ಸಾಧಿಸಲು ವಿನೂತನ ತಂತ್ರಜ್ಞಾನಗಳನ್ನು ಅಳವಡಿಸಿಕೊಳ್ಳುವುದಕ್ಕಾಗಿ ಔಪಚಾರಿಕ ವಿತ್ತೀಯ ಸಂಸ್ಥೆಗಳ ಮುಖಾಂತರ ಸರ್ಕಾರಿ ಯೋಜನೆ, ಕಾರ್ಯಕ್ರಮ ಹಾಗು ಸಬ್ಸಿಡಿಗಳಿಗೆ ದಾರಿ ಸುಗಮವಾಗುವುದನ್ನು ಖಚಿತಪಡಿಸುವಲ್ಲಿ ಸ್ವಸಹಾಯ ಸಂಘಗಳು, ಕೃಷಿ ಉತ್ಪಾದಕರ ಸಂಘಗಳು, ಕೃಷಿ ವ್ಯವಹಾರ ಕೇಂದ್ರಗಳು, ಸಾಮುದಾಯಿಕ ಪತ್ತಿನ ಸಂಘಗಳ ಸ್ಥಾಪನೆಯನ್ನು ಉತ್ತೇಜಿಸುವುದು;

(xxvi) ಸಾಮುದಾಯಿಕ ಮನರಂಜನಾ ಕಾರ್ಯಕ್ರಮಗಳು, ಹಬ್ಬ ಹರಿದಿನಗಳು, ಜಾತ್ರೆಗಳು ಹಾಗು ಇತರ ಸಾಂಸ್ಕೃತಿಕ ಸಂಘಟನೆಗಳು ಮತ್ತು ಸಂಸ್ಥೆಗಳು, ಗ್ರಾಮೀಣ ಆಟೋಟಗಳು, ಯೋಗ–ಧ್ಯಾನ, ಗ್ರಾಮೀಣ ಆರೋಗ್ಯ ಚಿಕಿತ್ಸಾಲಯಗಳನ್ನು ಉತ್ತೇಜಿಸುವ ಮೂಲಕ ಉತ್ತಮ ಆಹಾರ ಹಾಗೂ ಪೌಷ್ಠಿಕಾಂಶಗಳ ನಿರ್ವಹಣೆಯನ್ನು ಸಾಧ್ಯವನ್ನಾಗಿಸಿ ಸಾಮಾಜಿಕ, ಮಾನಸಿಕ ಮತ್ತು ದೈಹಿಕ ಆರೋಗ್ಯವನ್ನು ಉತ್ತಮಗೊಳಿಸುವುದು;

(xxvii) ಅಂತರ್ಗತ ಬೆಳವಣಿಗೆ ಮತ್ತು ಸಮಗ್ರ ಗ್ರಾಮೀಣಾಭಿವೃದ್ಧಿಯತ್ತ ಗುರೀಕರಿಸಿದ ಗ್ರಾಮೀಣಾವಶ್ಯ ದೃಷ್ಟಿಕೋನದ ಕೋರ್ಸ್ ಮತ್ತು ಅಧ್ಯಯನಗಳ ಕೋರ್ಸುಗಳನ್ನು ಶ್ರೀಮಂತಗೊಳಿಸಿ ಪ್ರಾಥಮಿಕ, ಮಾಧ್ಯಮಿಕ ಹಾಗೂ ಔದ್ಯೋಗಿಕ ಶಿಕ್ಷಣ ವ್ಯವಸ್ಥೆಗೆ ನಿರಂತರವಾಗಿ ಪುಷ್ಠಿ ನೀಡುವುದು;

(xxviii) ಗ್ರಾಮೀಣಾಭಿವೃದ್ಧಿಯ ಎಲ್ಲಾ ವಿಷಯಗಳ ಕುರಿತಾಗಿ ಸಮಾಲೋಚನಾ ಸೇವೆ ಒದಗಿಸುವುದು;

(xxix) ರಾಷ್ಟ್ರೀಯ, ರಾಜ್ಯ, ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಪಂಚಾಯತ್ ಮಟ್ಟದಲ್ಲಿನ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳ ಚಿಂತನೆ ಹಾಗೂ ಅವುಗಳ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಅನುಭವಗಳನ್ನು ವಿನಿಮಯ ಮಾಡಿಕೊಳ್ಳಲು ಉಸ್ತುವಾರಿ ಹಾಗು ಮೌಲ್ಯಮಾಪನ ಕೆಲಸವನ್ನು ಕೈಗೊಳ್ಳುವುದು;

(xxx) ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳ ನೀತಿ ರಚನೆ, ಆಡಳಿತ, ವ್ಯವಸ್ಥಾಪನೆ ಮತ್ತು ಜಾರಿಗೊಳಿಸುವಿಕೆಯಲ್ಲಿ ಸರ್ಕಾರಕ್ಕೆ ನೆರವಾಗುವುದು;

(xxxi) ಸರ್ಕಾರವು ವಹಿಸಬಹುದಾದ ಯಾವುದೇ ಇತರ ಚಟುವಟಿಕೆಗಯನ್ನು ಕೈಗೊಳ್ಳುವುದು;

(xxxii) ಜ್ಞಾನೋದಾಯಿಕ (enlightened) ಕಲಿಕೆ, ಕ್ಷೇತ್ರ ಕಾರ್ಯ ಹಾಗೂ ಸಮುದಾಯದೊಂದಿಗೆ ಪಾಲ್ಗೊಳ್ಳುವಿಕೆಯ ಮೂಲಕ ನಾಯಕತ್ವ ಹಾಗೂ ವ್ಯವಸ್ಥಾಪನಾ ಸಾಮರ್ಥ್ಯಕ್ಕಾಗಿ ವಿದ್ಯಾರ್ಥಿಗಳನ್ನು ಸಿದ್ಧಪಡಿಸುವುದು;

(xxxiii) ಗ್ರಾಮೀಣಾಭಿವೃದ್ಧಿ ಕಾರ್ಯ ಮತ್ತು ಸಾಮುದಾಯಿಕ ಸೇವೆಗಳಿಗೆ ಸರ್ಮಪಿಸುವತ್ತ ಬೋಧಕ ವರ್ಗ ಮತ್ತು ವಿದ್ಯಾರ್ಥಿಗಳ ಪ್ರತಿಭೆಯನ್ನು ಪ್ರವಹಿಸುವಂತೆ ಮಾಡಲು ವಿಶಿಷ್ಟ ಮಾರ್ಗಗಳ ಕಲಿಕೆ, ವೃತ್ತಿಗಳ ಪ್ರಬುದ್ಧತೆ ಅಭಿವೃದ್ಧಿಪಡಿಸುವುದನ್ನು ಖಚಿತಪಡಿಸಲು ಶೈಕ್ಷಣಿಕ ಸ್ವಾತಂತ್ರವನ್ನು ಉತ್ತೇಜಿಸುವುದು ಮತ್ತು ಕಾಪಾಡುವುದು;

(xxxiv) "ನಾವು ಜನರೊಂದಿಗೆ ಜೊತೆಗೂಡಿ ಕಲಿತು, ಜೊತೆಗೂಡಿ ಕೆಲಸ ಮಾಡಿ ಹಾಗೂ ಜೊತೆಗೂಡಿ ಬೆಳೆಯಬೇಕು" ಎನ್ನುವ ಮನೋಭಾವವನ್ನು ವಿದ್ಯಾರ್ಥಿಗಳಲ್ಲಿ ಬಿತ್ತಿ, ಜನರ ಮತ್ತು ಪರಿವರ್ತನಾ ಪ್ರತಿನಿಧಿಗಳ (ಏಜೆಂಟ್) ನಡುವಿನ "ವಿಶ್ವಾಸ ಅಭಾವ ಕಂದರ"ವನ್ನು ತುಂಬಿ ಬೆಸೆಯಲು ಯತ್ನಿಸುವುದು;

(xxxv)ಕ್ಷೇತ್ರಾನುಭವಸ್ಥರಿಗೆ, ಸರ್ಕಾರೇತರ ಸಂಸ್ಥೆಗಳಿಗೆ, ಅನ್ವೇಷಣಾಕಾರರಿಗೆ, ಜನಪ್ರಿಯ ಸಾಮಾಜಿಕ ಕಾರ್ಯಕರ್ತರಿಗಾಗಿ ವಿಶ್ವವಿದ್ಯಾಲಯವು "ಮುಕ್ತದ್ವಾರ ನೀತಿ" ಯನ್ನು ಅಳವಡಿಸಿಕೊಂಡು, ತನ್ನ ಬೋಧಕವರ್ಗದ ಬೋಧನಾ ಕಾರ್ಯಶಕ್ತಿಗೆ ಬೆಂಬಲಿತವಾಗಿ, ಅವರನ್ನು ಆಮಂತ್ರಿಸುವುದು;

(xxxvi) "ಸಲಹಾ-ಸಮಾಲೋಚನಾ" ಅಂಗವಾಗಿ ಬೋಧಕರು ಸ್ವತ: ಗ್ರಾಮೀಣಾಭಿವೃದ್ಧಿ ಕಾರ್ಯವಿಧಾನಗಳ ಮುಂಚೂಣಿ (cuttingedge) ವಿಚಾರಗಳ ಕುರಿತಾಗಿ ಬೋಧಕರು ಸ್ವತ: ಸಂಶೋಧನಾ ಯೋಜನೆಗಳಲ್ಲಿ ಕಾರ್ಯನಿರತರಾಗಿ ಪರಿಹಾರೋಪಾಯಗಳನ್ನು ಕಂಡುಹಿಡಿದು, ವಕಾಲತ್ತಿನ ಭಾಗವಾಗಿ, ಅಭಿವೃದ್ಧಿ ನೀತಿ ರಚನೆ ಕೈಂಕರ್ಯದಲ್ಲಿ ಸರ್ಕಾರಕ್ಕೆ ಸಲಹೆ ನೀಡುವುದು.

**5. ವಿಶ್ವವಿದ್ಯಾಲಯದ ಅಧಿಕಾರಗಳು ಮತ್ತು ಪ್ರಕಾರ್ಯಗಳು.**- ಈ ಮುಂದಿನವುಗಳು ವಿಶ್ವವಿದ್ಯಾಲಯದ ಅಧಿಕಾರಗಳು ಮತ್ತು ಪ್ರಕಾರ್ಯಗಳಾಗಿರತಕ್ಕದ್ದು,-

(i) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಶಾಲೆ, ಕೃಷಿ ವ್ಯವಹಾರ ವ್ಯವಸ್ಥಾಪನಾ ಮತ್ತು ಗ್ರಾಮೀಣಾಭಿವೃದ್ಧಿ ವ್ಯವಸ್ಥಾಪನಾ ಶಾಲೆ, ಪರಿಸರ ವಿಜ್ಞಾನ ಮತ್ತು ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯ ವ್ಯವಸ್ಥಾಪನಾ ಶಾಲೆ, ಸಾಮಾಜಿಕ ವಿಜ್ಞಾನಗಳ ಮತ್ತು ಗ್ರಾಮೀಣ ಪುನಾರಚನಾ ಶಾಲೆ, ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿ ಶಾಲೆ ಹಾಗೂ ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳ ಪುರೋಭಿವೃದ್ಧಿಗಾಗಿ ಅಗತ್ಯವಿರುವಂತಹ ಸಂಶೋಧನೆ, ಶಿಕ್ಷಣ ಮತ್ತು ಸಲಹಾ ಕೇಂದ್ರಗಳ ಆಡಳಿತ ಮತ್ತು ನಿರ್ವಹಣೆ;

(ii) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್‌ಗೆ ಸಂಬಂಧಿಸಿದಂತೆ, ವಿಶ್ವವಿದ್ಯಾಲಯಕ್ಕೆ ಸೂಕ್ತವೆನಿಸಬಹುದಾದ, ಜ್ಞಾನ ಅಥವಾ ಕಲಿಕಾ ಶಾಲೆಗಳಲ್ಲಿ ಸಲಹೆಗೆ ಏರ್ಪಾಡು ಮಾಡುವುದು ಮತ್ತು ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್‌ನ ಸಂಶೋಧನೆಗಾಗಿ ಮತ್ತು ಪುರೋಭಿವೃದ್ಧಿಗಾಗಿ ಮತ್ತು ಜ್ಞಾನ ಪ್ರಸಾರಕ್ಕಾಗಿ ಉಪಬಂಧವನ್ನು ಕಲ್ಪಿಸುವುದು;

(iii) ಸರ್ಕಾರದ ಪೂರ್ವಾನುಮೋದನೆಯೊಡನೆ ಅಧಿನಿಯಮದ ಧ್ಯೇಯೋದ್ದೇಶಗಳನ್ನು ನೆರವೇರಿಸಲು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಭಾಗಿಯಾಗುವುದು;

(iv) ಭಿತ್ತಿಯೇತರ (ಎಕ್ಸ್‌ಟ್ರಾ-ಮ್ಯೂರಲ್) ಮತ್ತು ಅನುಭವಾತ್ಮಕ ಬೋಧನೆ ಮತ್ತು ವಿಸ್ತರಣಾ ಚಟುವಟಿಕೆಗಳನ್ನು ಸಂಘಟಿಸುವುದು ಮತ್ತು ಕೈಗೆತ್ತಿಕೊಳ್ಳುವುದು;

(v) ವಿಶ್ವವಿದ್ಯಾಲಯವು ನಿರ್ಧರಿಸಬಹುದಾದ ಷರತ್ತುಗಳಿಗೊಳಪಟ್ಟು ಅಭ್ಯರ್ಥಿಗಳಿಗೆ ಪರೀಕ್ಷೆಗಳನ್ನು ನಡೆಸುವುದು ಮತ್ತು ಡಿಪ್ಲೊಮಾಗಳನ್ನು ಅಥವಾ ಸರ್ಟಿಫಿಕೇಟ್‌ಗಳನ್ನು ಮತ್ತು ಪದವಿಗಳನ್ನು ಹಾಗೂ ಇನ್ನಿತರ ಶೈಕ್ಷಣಿಕ ಪುರಸ್ಕಾರಗಳನ್ನು ಪ್ರದಾನ ಮಾಡುವುದು ಹಾಗೂ ಒಳ್ಳೆಯ ಮತ್ತು ಸಾಕಷ್ಟು ಕಾರಣಗಳಿಗಾಗಿ ಅಂತಹ ಯಾವುದೇ ಡಿಪ್ಲೋಮಾಗಳನ್ನು, ಸರ್ಟಿಫಿಕೇಟ್‌ಗಳನ್ನು, ಪದವಿಗಳನ್ನು ಅಥವಾ ಇನ್ನಿತರ ಶೈಕ್ಷಣಿಕ ಪುರಸ್ಕಾರಗಳನ್ನು ಹಿಂಪಡೆಯುವುದು;

(vi) ವಿನಿಯಮಗಳಲ್ಲಿ ನಿರೂಪಿಸಿರುವ ವಿಧಿವಿಧಾನಗಳಲ್ಲಿ ಗೌರವ ಪದವಿಗಳನ್ನು ಅಥವಾ ಇತರ ಪುರಸ್ಕಾರಗಳನ್ನು ಪ್ರದಾನ ಮಾಡುವುದು;

(vii) ಶುಲ್ಕಗಳನ್ನು ಮತ್ತು ಇತರ ಚಾರ್ಜುಗಳನ್ನು ನಿಗದಿಗೊಳಿಸುವುದು, ಕೋರುವುದು ಮತ್ತು ಸ್ವೀಕರಿಸುವುದು;

(viii) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ಸಭಾಂಗಣಗಳು ಮತ್ತು ವಸತಿ ನಿಲಯಗಳನ್ನು ಸಂಸ್ಥಾಪಿಸುವುದು ಮತ್ತು ನಿರ್ವಹಿಸುವುದು ಮತ್ತು ವಸತಿ ಸ್ಥಳಗಳನ್ನು ಮಾನ್ಯ ಮಾಡುವುದು ಹಾಗೂ ಅಂತಹ ಯಾವುದೇ ವಸತಿ ಸ್ಥಳಕ್ಕೆ ಮಂಜೂರು ಮಾಡಿರುವಂತಹ ಮಾನ್ಯತೆಯನ್ನು ಹಿಂಪಡೆಯುವುದು;

(ix) ವಿಶ್ವವಿದ್ಯಾಲಯದ ಅಭಿಪ್ರಾಯದಲ್ಲಿ ಅದರ ಧ್ಯೇಯೋದ್ದೇಶಗಳ ಮುಂದುವರಿಕೆಗಾಗಿ ಅಗತ್ಯವೆಂದೆನಿಸುವಂಥ ಸಂಶೋಧನೆ ಮತ್ತು ಸಲಹೆಗಳಿಗಾಗಿ ಶಾಲೆಗಳು, ವಿಶೇಷ ಕೇಂದ್ರಗಳು, ಪರಿಣಿತ ಅಧ್ಯಯನ ಕೇಂದ್ರಗಳು ಅಥವಾ ಇನ್ನಿತರ ಘಟಕಗಳನ್ನು ಸ್ಥಾಪಿಸುವುದು ಮತ್ತು ದತ್ತು ತೆಗೆದುಕೊಳ್ಳುವುದು;

(x) ವಿಶ್ವವಿದ್ಯಾಲಯದ ವಸತಿಗಳ ಮೇಲ್ವಿಚಾರಣೆ ನಡೆಸುವುದು ಮತ್ತು ನಿಯಂತ್ರಿಸುವುದು ಹಾಗೂ ವಿದ್ಯಾರ್ಥಿಗಳ ಶಿಸ್ತನ್ನು ನಿಯಂತ್ರಿಸುವುದು ಮತ್ತು ಅವರ ಆರೋಗ್ಯ ಪ್ರವರ್ತನೆಗಾಗಿ ಏರ್ಪಾಡು ಮಾಡುವುದು;

(xi) ವಿದ್ಯಾರ್ಥಿನಿಯರ ವಸತಿ, ಶಿಸ್ತು ಮತ್ತು ಬೋಧನೆಗೆ ಸಂಬಂಧಿಸಿದಂತೆ ಏರ್ಪಾಡುಗಳನ್ನು ಮಾಡುವುದು;

(xii) ಶೈಕ್ಷಣಿಕ, ತಾಂತ್ರಿಕ, ಆಡಳಿತಾತ್ಮಕ, ಲಿಪಿಕ ಹಾಗೂ ಇನ್ನಿತರ ಹುದ್ದೆಗಳನ್ನು ಸೃಜಿಸುವುದು ಮತ್ತು ತತ್ಸಂಬಂಧಿತ ನೇಮಕಾತಿಗಳನ್ನು ಮಾಡುವುದು;

(xiii) ವಿಶ್ವವಿದ್ಯಾಲಯದ ನೌಕರರಲ್ಲಿ ಶಿಸ್ತನ್ನು ನಿಯಂತ್ರಿಸುವುದು ಮತ್ತು ಜಾರಿಗೊಳಿಸುವುದು ಹಾಗೂ ಅಗತ್ಯವೆಂದು ಭಾವಿಸಬಹುದಾದಂಥ ಶಿಸ್ತು ಕ್ರಮಗಳನ್ನು ಕೈಗೊಳ್ಳುವುದು;

(xiv) ವಿಶ್ವವಿದ್ಯಾಲಯಕ್ಕೆ ಅಗತ್ಯವಿರುವ ಪ್ರಾಧ್ಯಾಪಕತ್ವ ಸಹ–ಪ್ರಾಧ್ಯಾಪಕತ್ವ ಸಹಾಯಕ–ಪ್ರಾಧ್ಯಾಪಕತ್ವ, ಪ್ರವಾಚಕತ್ವ, ಉಪನ್ಯಾಸಕತ್ವ ಮತ್ತು ಯಾವುವೇ ಇತರ ಬೋಧನಾ, ಶೈಕ್ಷಣಿಕ ಅಥವಾ ಸಂಶೋಧನಾ ಹುದ್ದೆಗಳನ್ನು ಸಂಸ್ಥಾಪಿಸುವುದು;

(xv) ವ್ಯಕ್ತಿಗಳನ್ನು ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಸಹ–ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ಪ್ರವಾಚಕರು, ಉಪನ್ಯಾಸಕರು ಅಥವಾ ಅನ್ಯಥಾ ಶಿಕ್ಷಕರು ಮತ್ತು ಸಂಶೋಧಕರಾಗಿ ನೇಮಕ ಮಾಡುವುದು;

(xvi) ಶಿಷ್ಯವೇತನ(ಫೆಲೋಷಿಪ್), ವಿದ್ಯಾರ್ಥಿ ವೇತನಗಳು, ಬಹುಮಾನಗಳು ಮತ್ತು ಪದಕಗಳನ್ನು ಸಂಸ್ಥಾಪಿಸುವುದು ಮತ್ತು ಪ್ರದಾನ ಮಾಡುವುದು;

(xvii) ಸಂಶೋಧನಾ ಮತ್ತು ಇತರ ಕೃತಿಗಳ ಮುದ್ರಣ, ಪುನರ್ ಮುದ್ರಣ ಮತ್ತು ಪ್ರಕಟಣೆಗಾಗಿ ಏರ್ಪಾಡು ಮಾಡುವುದು ಮತ್ತು ಪ್ರದರ್ಶನಗಳನ್ನು ಸಂಘಟಿಸುವುದು;

(xviii) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್‌ನ ಎಲ್ಲಾ ವಿಷಯಗಳ ಕುರಿತಾಗಿ ಸಂಶೋಧನೆಯನ್ನು ಪ್ರಾಯೋಜಿಸುವುದು ಮತ್ತು ಕೈಗೆತ್ತಿಕೊಳ್ಳುವುದು;

(xix) ವಿಶ್ವವಿದ್ಯಾಲಯವು ಕಾಲಕಾಲಕ್ಕೆ ನಿರ್ಧರಿಸಬಹುದಾದಂತಹ, ನಿಬಂಧನೆ ಮತ್ತು ಷರತ್ತುಗಳನ್ನು ಆಧರಿಸಿ ಒಪ್ಪಿರಬಹುದಾದಂತಹ ಉದ್ದೇಶಗಳಿಗಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಹಾಗೂ ಸಂವಾದಿ ವಿಷಯಗಳಲ್ಲಿ ಶಿಕ್ಷಣ, ತರಬೇತಿ ಮತ್ತು ಸಂಶೋಧನೆಗಳಲ್ಲಿ ಇತರ ಯಾವುದೇ ಸಂಸ್ಥೆಯೊಂದಿಗೆ ಸಹಕರಿಸುವುದು;

(xx) ಸಮಾನ ಧ್ಯೇಯೋದ್ದೇಶಗಳಿಗೆ ಅನುಕೂಲಕರವಾಗಿರಬಹುದಾದಂತಹ ,ವಿಧಾನಗಳಲ್ಲಿ ಶಿಕ್ಷಕರು ಮತ್ತು ವಿದ್ವಾಂಸರನ್ನು ವಿನಿಮಯ ಮಾಡಿಕೊಳ್ಳುವ ಮೂಲಕ, ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳಿಗೆ ಸಂಪೂರ್ಣವಾಗಿ ಅಥವಾ ಭಾಗಶಃ ಅನುರೂಪವಾಗಿರುವ ವಿಶ್ವದ ಯಾವುದೇ ಭಾಗದಲ್ಲಿನ, ಉನ್ನತ ಕಲಿಕಾ ಸಂಸ್ಥೆಗಳೊಂದಿಗೆ ಸಹಕರಿಸುವುದು;

(xxi) ವಿಶ್ವವಿದ್ಯಾಲಯದ ಖರ್ಚು ವೆಚ್ಚಗಳನ್ನು ನಿಯಂತ್ರಿಸುವುದು ಮತ್ತು ಲೆಕ್ಕಪತ್ರಗಳನ್ನು ನಿರ್ವಹಿಸುವುದು;

(xxii) ವಿಶ್ವವಿದ್ಯಾಲಯವು ಅಗತ್ಯವೆಂದು ಪರಿಗಣಿಸಬಹುದಾದಂತಹ ತರಗತಿ ಕೊಠಡಿಗಳು, ಅಧ್ಯಯನ ಸಭಾಂಗಣಗಳು, ಪ್ರಾಯೋಗಿಕ ಕ್ಷೇತ್ರಗಳು, ಕಾರ್ಯಾಗಾರಗಳು ಮತ್ತು ಇನ್ನಿತರ ಸೌಕರ್ಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು ಹಾಗೂ ವಿಶ್ವವಿದ್ಯಾಲಯಕ್ಕೆ ಅನುಕೂಲಕರವೆಂದು ಅಥವಾ ಅವಶ್ಯಕವೆಂದು ಕಾಣಿಸುವಂತಹ ಪ್ರಯೋಗಾಲಯಗಳನ್ನು, ಗ್ರಂಥಾಲಯಗಳನ್ನು ಮತ್ತು ಪರಾಮರ್ಶನ ಕೊಠಡಿಗಳನ್ನು ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(xxiii) ವಿಶ್ವವಿದ್ಯಾಲಯವನ್ನು ಸ್ಥಾಪಿಸಿರುವಂತಹ ಧ್ಯೇಯೋದ್ದೇಶಗಳಿಗೆ ಸಂಗತವಾಗಿ ಮತ್ತು ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ಅನುದಾನಗಳನ್ನು, ಚಂದಾಗಳನ್ನು, ದೇಣಿಗೆಗಳನ್ನು ಮತ್ತು ಉಡುಗೊರೆಗಳನ್ನು ಸ್ವೀಕರಿಸುವುದು;

(xxiv) ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ಅವಶ್ಯಕವಾಗಿರಬಹುದಾದಂತಹ ಅಥವಾ ಅನುಕೂಲಕರವಾಗಿರಬಹುದಾದಂತಹ ಹಾಗೂ ಅದಕ್ಕೆ ಸೂಕ್ತ ಮತ್ತು ಸಮುಚಿತವೆಂದು ಭಾವಿಸುವಂಥ ನಿಬಂಧನೆ ಮತ್ತು ಷರತ್ತುಗಳ ಮೇರೆಗೆ ಯಾವುದೇ ಭೂಮಿ ಅಥವಾ ಕಟ್ಟಡ ಅಥವಾ ನಿರ್ಮಿತಿಗಳನ್ನು

ಖರೀದಿಸುವುದು, ಗುತ್ತಿಗೆ ನೀಡುವುದು ಅಥವಾ ದಾನ ಅಥವಾ ಅನ್ಯಥಾ ರೂಪದಲ್ಲಿ ಅಂಗೀಕರಿಸುವುದು ಮತ್ತು ಅಂತಹ ಯಾವುದೇ ಕಟ್ಟಡ ಅಥವಾ ನಿರ್ಮಿತಿಗಳನ್ನು ನಿರ್ಮಿಸುವುದು ಅಥವಾ ಮಾರ್ಪಡಿಸುವುದು ಮತ್ತು ನಿರ್ವಹಿಸುವುದು;

(xxv) ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಮತ್ತು ಚಟುವಟಿಕೆಗಳಿಗೆ ಹಾನಿಯಾಗದಂತೆ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಸೂಕ್ತ ಮತ್ತು ಸಮರ್ಪಕವೆನಿಸುವಂತಹ ನಿಬಂಧನೆಗಳ ಮೇಲೆ ವಿಶ್ವವಿದ್ಯಾಲಯದ, ಚರ ಅಥವಾ ಸ್ಥಿರ ಸ್ವತ್ತುಗಳ, ಎಲ್ಲಾ ಅಥವಾ ಯಾವುದೇ ಭಾಗದ ಮಾರಾಟ, ವಿನಿಮಯ, ಗುತ್ತಿಗೆ ಅಥವಾ ಅನ್ಯಥಾ ವಿಲೆ ಮಾಡುವುದು;

(xxvi) ಭಾರತ ಸರ್ಕಾರದ ಅಥವಾ ಇತರ ವಾಗ್ದಾನ ಪತ್ರಗಳು, ವಿನಿಮಯ ಬಿಲ್ಲುಗಳು, ಧನಾದೇಶಗಳು ಅಥವಾ ಇತರ ವರ್ಗಾವಣೀಯ ಲಿಖಿತ ಪತ್ರಗಳನ್ನು ಬರೆಯುವುದು ಮತ್ತು ಸ್ವೀಕರಿಸುವುದು, ರಚಿಸುವುದು ಮತ್ತು ಹಿಂಬರಹ ನೀಡುವುದು, ರಿಯಾಯಿತಿ ನೀಡುವುದು ಮತ್ತು ವರ್ಗಾಯಿಸುವುದು;

(xxvii) ವಿಶ್ವವಿದ್ಯಾಲಯಕ್ಕೆ ಸೇರಿರುವ ಅಥವಾ ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ ಅರ್ಜಿಸಿಕೊಳ್ಳಬೇಕಾದ ಸರ್ಕಾರದ ಭದ್ರತಾ ಪತ್ರಗಳು ಸೇರಿದಂತೆ, ಚರ ಅಥವಾ ಸ್ಥಿರ ಸ್ವತ್ತುಗಳ ಸಂಬಂಧದಲ್ಲಿ ಹಸ್ತಾಂತರಗಳು, ವರ್ಗಾವಣೆಗಳು, ಮರುಹಸ್ತಾಂತರಗಳು, ಅಡಮಾನಗಳು, ಗುತ್ತಿಗೆಗಳು, ಪರವಾನಿಗೆಗಳು ಮತ್ತು ಒಪ್ಪಂದಗಳನ್ನು ಕಾರ್ಯಗತಗೊಳಿಸುವುದು;

(xxviii) ವಿಶ್ವವಿದ್ಯಾಲಯದ ಲಿಖಿತವನ್ನು ಬರೆಯುವ ಅಥವಾ ಯಾವುದೇ ವ್ಯವಹಾರವನ್ನು ನಿರ್ವಹಿಸುವ ಸಲುವಾಗಿ, ತಾನು ಯುಕ್ತವೆಂದು ಭಾವಿಸಬಹುದಾದ ಯಾವೊಬ್ಬ ವ್ಯಕ್ತಿಯನ್ನು ನೇಮಿಸುವುದು;

(xxix) ವಿಶ್ವವಿದ್ಯಾಲಯದ ಯಾವುದೇ ತರಗತಿಗಳನ್ನು ಅಥವಾ ವಿಭಾಗಗಳನ್ನು ಅಥವಾ ನಿರ್ದೇಶನಾಲಯಗಳನ್ನು ಮುಚ್ಚುವುದು;

(xxx) ಅನುದಾನಗಳನ್ನು ಸ್ವೀಕರಿಸುವುದಕ್ಕಾಗಿ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು, ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಅಥವಾ ಇತರ ಪ್ರಾಧಿಕಾರಗಳೊಂದಿಗೆ ಯಾವುದೇ ಒಪ್ಪಂದಗಳನ್ನು ಮಾಡಿಕೊಳ್ಳುವುದು;

(xxxi) ಯುಕ್ತವೆಂದು ಭಾವಿಸಬಹುದಾದಂಥ ನಿಬಂಧನೆಗಳನ್ನು ಆಧರಿಸಿ ಯಾವುದೇ ರೀತಿಯ ಹಣ, ಭದ್ರತಾ ಪತ್ರಗಳು ಅಥವಾ ಸ್ವತ್ತುಗಳ ಮಂಜೂರಾತಿಗಳನ್ನು ಸ್ವೀಕರಿಸುವುದು;

(xxxii) ಯುಕ್ತವೆಂದು ಭಾವಿಸಬಹುದಾದಂಥ ನಿಬಂಧನೆ ಮತ್ತು ಷರತ್ತುಗಳನ್ನು ಆಧರಿಸಿ ವಿಶ್ವವಿದ್ಯಾಲಯದ ಎಲ್ಲಾ ಅಥವಾ ಯಾವುದೇ ಆಸ್ತಿಗಳ ಮತ್ತು ಸ್ವತ್ತುಗಳ ಮೇಲೆ ಬಂಧಪತ್ರಗಳು, ಅಡಮಾನಗಳು, ವಾಗ್ದಾನ ಪತ್ರಗಳು ಅಥವಾ ಇತರ ಕಟ್ಟುಪಾಡುಗಳು ಅಥವಾ ಭದ್ರತೆಗಳನ್ನು ಅವಲಂಬಿಸಿ ಅಥವಾ ಯಾವುದೇ ಭದ್ರತೆಯಿಲ್ಲದೆ ಹಣವನ್ನು ಸಾಲದ ರೂಪದಲ್ಲಿ ಪಡೆಯುವುದು ಮತ್ತು ವಿಶ್ವವಿದ್ಯಾಲಯದ ನಿಧಿಗಳಿಂದ ಹಣ ಪಡೆಯುವಾಗಿನ ಎಲ್ಲಾ ಪೂರಕ ಖರ್ಚು – ವೆಚ್ಚಗಳನ್ನು ಪಾವತಿಸುವುದು ಮತ್ತು ಯಾವುದೇ ಸಾಲದ ಹಣವನ್ನು ಪಾವತಿಸುವುದು ಮತ್ತು ಮರಳಿ ಪಡೆದುಕೊಳ್ಳುವುದು;

(xxxiii) ವಿಶ್ವವಿದ್ಯಾಲಯದ ನಿಧಿಗಳನ್ನು ಅಥವಾ ವಿಶ್ವವಿದ್ಯಾಲಯಕ್ಕೆ ನೀಡಿರುವ ಹಣಗಳನ್ನು ತಾನು ಯುಕ್ತವೆಂದು ಭಾವಿಸಬಹುದಾದ ಅಂಥ ಭದ್ರತಾ ಪತ್ರಗಳಲ್ಲಿ ಅಥವಾ ಅವುಗಳ ಆಧಾರದ ಮೇಲೆ ಮತ್ತು ಅಂಥ ವಿಧಾನಗಳಲ್ಲಿ ಹೂಡಿಕೆ ಮಾಡುವುದು ಮತ್ತು ಯಾವುದೇ ಹೂಡಿಕೆಯನ್ನು ಕಾಲಕಾಲಕ್ಕೆ ಪರಿವರ್ತಿಸುವುದು;

(xxxiv) ವಿಶ್ವವಿದ್ಯಾಲಯದ ವ್ಯವಹರಣೆಗಳನ್ನು ಮತ್ತು ವ್ಯವಸ್ಥಾಪನೆಯನ್ನು ನಿಯಂತ್ರಿಸುವುದಕ್ಕಾಗಿ ಅವಶ್ಯಕವೆನಿಸುವೆಂದು ಪರಿಗಣಿಸಬಹುದಾದಂಥ ವಿನಿಯಮಗಳನ್ನು, ಕಾಲಕಾಲಕ್ಕೆ, ರಚಿಸುವುದು ಮತ್ತು ಅವುಗಳನ್ನು ಬದಲಾಯಿಸುವುದು, ಮಾರ್ಪಡಿಸುವುದು ಮತ್ತು ರದ್ದುಗೊಳಿಸುವುದು;

(xxxv) ಶೈಕ್ಷಣಿಕ, ಸಂಶೋಧನಾ, ತಾಂತ್ರಿಕ, ಆಡಳಿತ ಮತ್ತು ಇತರ ಸಿಬ್ಬಂದಿಗಳ ಪ್ರಯೋಜನಕ್ಕಾಗಿ ವಿನಿಯಮಗಳಲ್ಲಿ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು ಸೂಕ್ತವೆಂದು ಭಾವಿಸಬಹುದಾದಂಥ ಪಿಂಚಣಿ, ವಿಮೆ, ಭವಿಷ್ಯನಿಧಿ ಮತ್ತು ಉಪದಾನವನ್ನು ಸಂಸ್ಥಾಪಿಸುವುದು ಮತ್ತು ವಿಶ್ವವಿದ್ಯಾಲಯದ ಯಾವುದೇ ಉದ್ಯೋಗಿಗಳ ಹಿತಕ್ಕಾಗಿ, ಸೂಕ್ತವೆಂದು ಭಾವಿಸಬಹುದಾದಂಥ, ಅನುದಾನಗಳನ್ನು ನೀಡುವುದು ಮತ್ತು ವಿಶ್ವವಿದ್ಯಾಲಯದ ಸಿಬ್ಬಂದಿ ಮತ್ತು ವಿದ್ಯಾರ್ಥಿಗಳ ಪ್ರಯೋಜನಕ್ಕಾಗಿ ಸಂಘಗಳು, ಸಂಸ್ಥೆಗಳು, ನಿಧಿಗಳು, ನ್ಯಾಸಗಳು ಮತ್ತು ಸಾರಿಗೆ–ಸಂಪರ್ಕಗಳ ಸ್ಥಾಪನೆಗೆ ಮತ್ತು ಬೆಂಬಲಕ್ಕೆ ನೆರವು ನೀಡುವುದು;

(xxxvi) ವಿಶ್ವವಿದ್ಯಾಲಯವು ನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊರತುಪಡಿಸಿ, ಅದರ ಎಲ್ಲಾ ಅಥವಾ ಯಾವುದೇ ಅಧಿಕಾರಗಳನ್ನು ಕುಲಪತಿಯವರಿಗೆ ಅಥವಾ ಯಾವುದೇ ಸಮಿತಿಗೆ ಅಥವಾ ಯಾವುದೇ

ಉಪ–ಸಮಿತಿಗೆ ಅಥವಾ ಅದರ ನಿಕಾಯದ ಯಾವೊಬ್ಬ ಅಥವಾ ಹೆಚ್ಚಿನ ಸದಸ್ಯರಿಗೆ ಅಥವಾ ಅದರ ಅಧಿಕಾರಿಗಳಿಗೆ ಪ್ರತ್ಯಾಯೋಜಿಸುವುದು; ಮತ್ತು

(xxxvii) ಮೇಲ್ಕಾಣಿಸಿರುವ ಅಥವಾ ಅವುಗಳ ಪೈಕಿ ಯಾವೊಂದರ ಧ್ಯೇಯೋದ್ದೇಶಗಳ ಈಡೇರಿಕೆಗೆ ಅಥವಾ ವಿಸ್ತರಣೆಗೆ ಅವಶ್ಯಕ, ಅನುಕೂಲಕರ ಅಥವಾ ಆನುಷಂಗಿಕವೆಂದು ವಿಶ್ವವಿದ್ಯಾಲಯವು ಪರಿಗಣಿಸಬಹುದಾದಂತಹ ಇತರ ಎಲ್ಲಾ ಕಾರ್ಯಗಳನ್ನು ಮಾಡುವುದು.

**6. ವಿಶ್ವವಿದ್ಯಾಲಯದ ಬೋಧನೆ.–** (1) ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೋಮಾಗಳು ಮತ್ತು ಸರ್ಟಿಫಿಕೇಟ್‌ಗಳಿಗೆ ಸಂಬಂಧಿಸಿದ ಎಲ್ಲಾ ಬೋಧನೆಗಳನ್ನು ವಿನಿಯಮಗಳಲ್ಲಿ ನಿಯಮಿಸಿರುವ ಪಠ್ಯಕ್ರಮದನುಸಾರ ಕುಲಪತಿಗಳ ನಿಯಂತ್ರಣದ ಅಡಿಯಲ್ಲಿ ಶಾಲೆಗಳ ಶಿಕ್ಷಕರು ನಿರ್ವಹಿಸತಕ್ಕದ್ದು.

(2) ನಿಯಮಗಳಲ್ಲಿ ನಿಯಮಿಸಿರುವಂತೆ ಕೋರ್ಸ್‌ಗಳನ್ನು ಮತ್ತು ಪಠ್ಯ ವಿಷಯಗಳನ್ನು ಮತ್ತು ಬೋಧನೆಗಳನ್ನು ಸಂಘಟಿಸುವ ಹೊಣೆ ಪ್ರಾಧಿಕಾರಿಗಳದ್ದಾಗಿರತಕ್ಕದ್ದು.

**7. ವಿಶ್ವವಿದ್ಯಾಲಯಕ್ಕೆ ಪ್ರವೇಶ.–** (1) ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳಿಗೊಳಪಟ್ಟು ವಿಶ್ವವಿದ್ಯಾಲಯದಲ್ಲಿ ಎಲ್ಲಾ ವ್ಯಕ್ತಿಗಳಿಗೆ ಮುಕ್ತ ಪ್ರವೇಶ ಇರತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಇರುವುದು ಯಾವುದೂ ವಿಶ್ವವಿದ್ಯಾಲಯವನ್ನು,-

(ಎ) ನಿಯಮಿಸಲಾದ ಶೈಕ್ಷಣಿಕ ಅರ್ಹತೆಗಳನ್ನು ಅಥವಾ ಗುಣಮಟ್ಟವನ್ನು ಪಡೆದುಕೊಂಡಿರದ ಯಾವೊಬ್ಬ ವ್ಯಕ್ತಿಗೆ ಯಾವುದೇ ವ್ಯಾಸಂಗ ಕ್ರಮಕ್ಕೆ ಪ್ರವೇಶ ನೀಡುವುದಕ್ಕೆ;

(ಬಿ) ಪದವಿ, ಡಿಪ್ಲೋಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿ ನೀಡಿಕೆಗಾಗಿ ಅಗತ್ಯಪಡಿಸಲಾದ ಕನಿಷ್ಠ ಗುಣಮಟ್ಟಕ್ಕಿಂತ ತನ್ನ ಶೈಕ್ಷಣಿಕ ಸಾಧನೆಯು, ಕಡಿಮೆ ಇರುವ ಯಾವೊಬ್ಬ ವಿದ್ಯಾರ್ಥಿಯನ್ನು ವಿಶ್ವವಿದ್ಯಾಲಯದ ಹಾಜರಿಪಟ್ಟಿಯಲ್ಲಿ ಉಳಿಸಿಕೊಳ್ಳುವುದಕ್ಕೆ; ಅಥವಾ

(ಸಿ) ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಅಥವಾ ಇತರ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಹಕ್ಕುಗಳು ಮತ್ತು ವಿಶೇಷಾಧಿಕಾರಗಳಿಗೆ ಬಾಧಕವಾಗುವಂತಿರುವ ನಡತೆಯುಳ್ಳ ಯಾವೊಬ್ಬ ವ್ಯಕ್ತಿಗೆ ಅಥವಾ ಯಾವೊಬ್ಬ ವಿದ್ಯಾರ್ಥಿಗೆ ಪ್ರವೇಶ ನೀಡುವುದಕ್ಕೆ ಅಥವಾ ಅವರನ್ನು ಉಳಿಸಿಕೊಳ್ಳುವುದಕ್ಕೆ,

–ಅಗತ್ಯಪಡಿಸತಕ್ಕದ್ದಲ್ಲ.

(3) (2)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು ಸರ್ಕಾರವು, ಆದೇಶದ ಮೂಲಕ ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಶೇಕಡಾವಾರು ಸ್ಥಾನಗಳನ್ನು ವಿಶ್ವವಿದ್ಯಾಲಯವು, ಅನುಸೂಚಿತ ಜಾತಿಗಳಿಗೆ, ಅನುಸೂಚಿತ ಪಂಗಡಗಳಿಗೆ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗಾಗಿ ಮೀಸಲಿಡತಕ್ಕದ್ದೆಂದು ನಿರ್ದೇಶಿಸಬಹುದು ಮತ್ತು ಅಂಥ ನಿರ್ದೇಶನವನ್ನು ನೀಡಲಾಗಿದ್ದಲ್ಲಿ ವಿಶ್ವವಿದ್ಯಾಲಯವು ತದನುಸಾರವಾಗಿ ಸ್ಥಾನಗಳನ್ನು ಮೀಸಲಿಡತಕ್ಕದ್ದು.

**8. ವಿಶ್ವವಿದ್ಯಾಲಯದ ಸಂಶೋಧನೆ.–** ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರದ ಅಡಿಯಲ್ಲಿ ವಿನಿಯಮಗಳಲ್ಲಿ ನಿಯಮಿಸಿರುವ ರೂಢಿಗಳನುಸಾರವಾಗಿ ಕುಲಪತಿಗಳ ನಿಯಂತ್ರಣದಡಿಯಲ್ಲಿ ಅಧಿಕಾರಿಗಳು ಅಥವಾ ಶಿಕ್ಷಕರು ಅಥವಾ ಸಂಶೋಧಕರು ವಿಶ್ವವಿದ್ಯಾಲಯದ ಎಲ್ಲಾ ಸಂಶೋಧನಾ ಮತ್ತು ಅನ್ವೇಷಣಾ ಚಟುವಟಿಕೆಗಳನ್ನು ನಿರ್ವಹಿಸತಕ್ಕದ್ದು.

**9. ಶಿಸ್ತು, ಪರಿವೀಕ್ಷಣೆ ಮತ್ತು ನಿಯಂತ್ರಣ.–** (1) ಕುಲಾಧಿಪತಿಯವರು ತಾನಾಗಿ ಅಥವಾ ರಾಜ್ಯ ಸರ್ಕಾರದ ಶಿಫಾರಸುಗಳ ಮೇಲೆ ತಾನು ನಿರ್ದೇಶಿಸಬಹುದಾದಂತೆ ಒಬ್ಬ ಅಥವಾ ಹೆಚ್ಚು ವ್ಯಕ್ತಿಗಳಿರುವ ಒಂದು ಆಯೋಗದಿಂದ, ವಿಶ್ವವಿದ್ಯಾನಿಲಯದ ಕಟ್ಟಡಗಳ, ಪ್ರಯೋಗ ಶಾಲೆಗಳ, ಗ್ರಂಥಾಲಯಗಳ, ವಸ್ತು ಸಂಗ್ರಹಾಲಯಗಳ, ಕಾರ್ಯಾಗಾರಗಳ, ಸಾಧನ ಸಾಮಗ್ರಿಗಳ ಮತ್ತು ವಿಶ್ವವಿದ್ಯಾನಿಲಯವು, ನಿರ್ವಹಿಸುವ, ಆಡಳಿತ ನಡೆಸುವ, ಮನ್ನಣೆ ಕೊಟ್ಟಿರುವ ಅಥವಾ ಅನುಮೋದಿಸಿರುವ ಯಾವುದೇ ಸಂಸ್ಥೆ ಮತ್ತು ವಿಶ್ವವಿದ್ಯಾನಿಲಯವು ನಡೆಸಿದ ಅಥವಾ ನಿರ್ವಹಿಸಿದ ಪರೀಕ್ಷೆಗಳ, ಬೋಧನೆಗಳ ಮತ್ತು ಇತರ ಕೆಲಸಗಳ ಪರಿವೀಕ್ಷಣೆಯನ್ನು ಮಾಡಿಸಬಹುದು ಮತ್ತು ವಿಶ್ವವಿದ್ಯಾನಿಲಯದ ಯಾವೊಬ್ಬ ನೌಕರನ ವಿರುದ್ಧ ವಿಶ್ವವಿದ್ಯಾನಿಲಯಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪೂರಕವಾಗಿ ಮಾಡಲಾದ ಯಾವುದೇ ನಿರ್ದಿಷ್ಟ ಆಪಾದನೆಗಳ ಬಗ್ಗೆ ಅದೇ ರೀತಿ ಪರಿವೀಕ್ಷಣೆ ಮಾಡಿಸಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಪರಿವೀಕ್ಷಣೆ ಅಥವಾ ವಿಚಾರಣೆಯನ್ನು ಮಾಡಲು ನಿರ್ದೇಶಿಸಲಾದ ಆಯೋಗವು ಸಂಬಂಧಪಟ್ಟ ಸಂಸ್ಥೆಗಳನ್ನು ಮತ್ತು ಆವರಣಗಳನ್ನು ಪ್ರವೇಶಿಸಲು ಮತ್ತು ಅಗತ್ಯವಾಗಬಹುದಾದಂಥ ಲೆಕ್ಕಪತ್ರಗಳನ್ನು ಅಥವಾ ಇತರ ದಾಖಲೆಗಳನ್ನು ಪರಿವೀಕ್ಷಿಸಲು ಅವಕಾಶವಿರತಕ್ಕದ್ದು.

(3) ಆಯೋಗವು, ಪರಿವೀಕ್ಷಣೆಯ ಅಥವಾ ವಿಚಾರಣೆಯ ಫಲಿತಾಂಶದ ವರದಿಯನ್ನು ಕುಲಾಧಿಪತಿಗೆ ಸಲ್ಲಿಸತಕ್ಕದ್ದು ಮತ್ತು ಅದರ ಪ್ರತಿಯನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(4) ಪರಿವೀಕ್ಷಣೆಯ ವರದಿಯನ್ನು ಸ್ವೀಕರಿಸಿದ ಕೂಡಲೇ ಕುಲಾಧಿಪತಿಯು, ಅದರ ಮೇಲೆ ತನ್ನ ತೀರ್ಮಾನಗಳನ್ನು ದಾಖಲಿಸತಕ್ಕದ್ದು ಮತ್ತು ಅವಶ್ಯಕವಾಗಬಹುದಾದ ಅಥವಾ ತಾನು ನಿರ್ದೇಶಿಸಬಹುದಾದ ಕ್ರಮ ಕೈಕೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(5) ರಾಜ್ಯ ಸರ್ಕಾರವು, ವಿಚಾರಣೆಯ ಅಥವಾ ಪರಿವೀಕ್ಷಣೆಯ ವರದಿಯಲ್ಲಿಯ ತೀರ್ಮಾನಗಳಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ನಿರ್ದೇಶಿಸಿದಂತೆ ಅಂಥ ಕ್ರಮ ಕೈಗೊಳ್ಳಲು ಪ್ರಾರಂಭಿಸುವಂತೆ ಕುಲಪತಿಗೆ ನಿರ್ದೇಶಿಸತಕ್ಕದ್ದು ಮತ್ತು ಕಾರ್ಯನಿರ್ವಾಹಕ ಪರಿಷತ್ತು ಸರ್ಕಾರದ ನಿರ್ದೇಶನಗಳನ್ನು ಅನುಷ್ಠಾನಗೊಳಿಸತಕ್ಕದ್ದು.

(6) ಕುಲಪತಿಯು, ರಾಜ್ಯ ಸರ್ಕಾರದ ಆದೇಶಗಳಲ್ಲಿ ನಿರ್ದಿಷ್ಟಪಡಿಸಲಾದ ರಾಜ್ಯ ಸರ್ಕಾರದ ನಿರ್ದೇಶನಗಳನ್ನು ಅನುಸರಿಸಿ ಕೈಗೊಂಡ ಕ್ರಮದ ಬಗ್ಗೆ ಒಂದು ವರದಿಯನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(7) ರಾಜ್ಯ ಸರ್ಕಾರದ ತೀರ್ಮಾನಗಳನ್ನು ಪಾಲಿಸಲು ಕುಲಪತಿಯು ತಪ್ಪಿದಲ್ಲಿ, ಆಗ ಆ ಬಗ್ಗೆ ಕುಲಾಧಿಪತಿಗೆ ವರದಿಮಾಡತಕ್ಕದ್ದು. ಅವರ ಆದೇಶವು ಅಂತಿಮವಾಗಿರತಕ್ಕದ್ದು ಮತ್ತು ಕುಲಾಧಿಪತಿಯವರ ಆದೇಶಗಳಲ್ಲಿ ನಿರೂಪಿಸಲಾದ ಅಂಥ ಅವಧಿಯೊಳಗೆ ಕುಲಪತಿಯು ಅವುಗಳನ್ನು ಕಾರ್ಯಗತಗೊಳಿಸತಕ್ಕದ್ದು.

(8) ಕಾರ್ಯನಿರ್ವಾಹಕ ಪರಿಷತ್ತು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂತೆ, ಅಂಥ ವಿವರಣ ಪಟ್ಟಿಗಳು, ತಃಖ್ತೆಗಳು, ಲೆಕ್ಕಪತ್ರಗಳು ಅಥವಾ ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಸಂಬಂಧಪಡುವ ಇತರ ವಿವರಗಳನ್ನು ಸಲ್ಲಿಸತಕ್ಕದ್ದು.

**10. ನಿರ್ದೇಶನಗಳನ್ನು ನೀಡಲು ಅಧಿಕಾರ.–** ಕುಲಾಧಿಪತಿಯು, ತಾನಾಗಿ ಅಥವಾ ರಾಜ್ಯ ಸರ್ಕಾರದ ಶಿಫಾರಸಿನ ಮೇಲೆ, ವಿಶ್ವವಿದ್ಯಾನಿಲಯದ ಆಡಳಿತ ಮತ್ತು ಶೈಕ್ಷಣಿಕ ಕಾರ್ಯನಿರ್ವಹಣೆಯ ಮತ್ತು ವಿಶೇಷವಾಗಿ ಶಾಂತಿ ಮತ್ತು ನೆಮ್ಮದಿಯನ್ನು ಕಾಯ್ದುಕೊಂಡುಬರುವ ದೃಷ್ಟಿಯಿಂದ ಮತ್ತು ಸ್ವತ್ತು ಮತ್ತು ಹಣಕಾಸು ವ್ಯವಸ್ಥೆಯನ್ನು ಸಂರಕ್ಷಿಸುವುದಕ್ಕಾಗಿ ಅವಶ್ಯಕ ಅಥವಾ ಯುಕ್ತವಾಗಬಹುದಾದ ಅಂಥ ನಿರ್ದೇಶನಗಳನ್ನು ಹೊರಡಿಸಬಹುದು.

**11. ವಿಶ್ವವಿದ್ಯಾನಿಲಯದ ಆದೇಶಗಳನ್ನು ರದ್ದುಗೊಳಿಸಲು ಅಧಿಕಾರ.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ಈ ಅಧಿನಿಯಮದ ಉಪಬಂಧಗಳಿಗೆ ಸುಸಂಗತವಾಗಿಲ್ಲವೆಂದು ಅಥವಾ ಅನ್ಯಥಾ ರಾಜ್ಯಸರ್ಕಾರದ ಕಾರ್ಯನೀತಿಗೆ ಅಸಂಗತವಾಗಿದೆಯೆಂದು ತಾನು ಅಭಿಪ್ರಾಯಪಡುವ ಯಾವುದೇ ಆದೇಶ, ಅಧಿಸೂಚನೆ, ನಿರ್ಣಯ, ವಿನಿಯಮ ಅಥವಾ ಯಾವುವೇ ವ್ಯವಹರಣೆಗಳನ್ನು ರದ್ದುಗೊಳಿಸಬಹುದು:

ಪರಂತು, ಅಂಥ ಯಾವುದೇ ಆದೇಶವನ್ನು ಮಾಡುವುದಕ್ಕೆ ಮೊದಲು ರಾಜ್ಯ ಸರ್ಕಾರವು, ವಿಶ್ವವಿದ್ಯಾನಿಲಯಕ್ಕೆ ಒಂದು ಅವಕಾಶವನ್ನು ಕೊಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಿದ ಪ್ರತಿಯೊಂದು ಆದೇಶವನ್ನು ಅದನ್ನು ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

## ಅಧ್ಯಾಯ – III

## ವಿಶ್ವವಿದ್ಯಾಲಯದ ಅಧಿಕಾರಿಗಳು

**12. ವಿಶ್ವವಿದ್ಯಾಲಯದ ಅಧಿಕಾರಿಗಳು.–** ಈ ಕೆಳಕಂಡವರು ವಿಶ್ವವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು ಎಂದರೆ:–

(1) ಕುಲಾಧಿಪತಿಗಳು;

(2) ಸಹಕುಲಾಧಿಪತಿಗಳು;

(3) ಕುಲಪತಿಗಳು;

(4) ಕುಲಸಚಿವರು;

(5) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣಾ ನಿರ್ದೇಶಕರು;

(6) ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನೆ;

(7) ಎಲ್ಲಾ ಶಾಲೆಗಳ ಮುಖ್ಯಸ್ಥರು;

(8) ಹಣಕಾಸು ಅಧಿಕಾರಿ;

(9) ವಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ಇತರ ಅಧಿಕಾರಿಗಳು.

**13. ಕುಲಾಧಿಪತಿಗಳು.–** (1) ಕರ್ನಾಟಕದ ರಾಜ್ಯಪಾಲರು ತಮ್ಮ ಹುದ್ದೆಯ ಬಲದಿಂದಾಗಿ ವಿಶ್ವವಿದ್ಯಾಲಯದ ಕುಲಾಧಿಪತಿಗಳಾಗಿರತಕ್ಕದ್ದು.

(2) ಕುಲಾಧಿಪತಿಯವರು ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಘಟಿಕೋತ್ಸವಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ವಿಶ್ವವಿದ್ಯಾಲಯವು, ಕುಲಾಧಿಪತಿಯವರ ಪೂರ್ವಾನುಮೋದನೆ ಪಡೆಯದೆ ಯಾವ ವ್ಯಕ್ತಿಗೂ ಯಾವುದೇ ಗೌರವ ಪದವಿಯನ್ನು ನೀಡತಕ್ಕದ್ದಲ್ಲ.

(4) ಕುಲಾಧಿಪತಿಯವರು ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ತಮಗೆ ಪ್ರದತ್ತವಾಗಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

**14. ಸಹಕುಲಾಧಿಪತಿಗಳು.–** (1) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಪ್ರಭಾರದಲ್ಲಿರುವ ಸಚಿವರು ತಮ್ಮ ಹುದ್ದೆಯ ಬಲದಿಂದಾಗಿ ಸಹಕುಲಾಧಿಪತಿಗಳಾಗಿರತಕ್ಕದ್ದು.

(2) ಸಹಕುಲಾಧಿಪತಿಯವರು, ಕುಲಾಧಿಪತಿಯವರ ಅನುಪಸ್ಥಿತಿಯಲ್ಲಿ ವಿಶ್ವವಿದ್ಯಾಲಯದ ಘಟಿಕೋತ್ಸವದ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಸಹಕುಲಾಧಿಪತಿಯವರು ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಅಥವಾ ವಿನಿಯಮಗಳ ಅಡಿಯಲ್ಲಿ ತಮಗೆ ಪ್ರದತ್ತವಾಗಬಹುದಾದಂಥ ಕುಲಾಧಿಪತಿಯವರ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಚಲಾಯಿಸತಕ್ಕದ್ದು. ಕುಲಾಧಿಪತಿಯವರು ಸಹಕುಲಾಧಿಪತಿಯವರಿಗೆ ಲಿಖಿತ ಆದೇಶದ ಮೂಲಕ ಪ್ರತ್ಯಾಯೋಜಿಸಬಹುದಾದಂಥ ಕುಲಾಧಿಪತಿಯವರ ಅಧಿಕಾರಗಳನ್ನು ಸಹ ಅವರು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ಸಹ ನಿರ್ವಹಿಸತಕ್ಕದ್ದು ಮತ್ತು ಅಂಥ ಪ್ರತ್ಯಾಯೋಜನೆಯು ಆ ಆದೇಶದಲ್ಲಿ ನಿರ್ದಿಷ್ಟಪಡಿಸಿದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೊಳಪಟ್ಟಿರತಕ್ಕದ್ದು.

**15. ಕುಲಪತಿಗಳು.–** (1) ಕುಲಪತಿಗಳು ವಿಶ್ವವಿದ್ಯಾಲಯದ ಪೂರ್ಣಾವಧಿ ಅಧಿಕಾರಿಯಾಗಿರತಕ್ಕದ್ದು ಮತ್ತು ರಾಜ್ಯ ಸರ್ಕಾರವು ರಚಿಸಿದ ಶೋಧನಾ ಸಮಿತಿಯ ಮೂಲಕ ಆಯ್ಕೆ ಮಾಡಲಾದ, ವಿಶೇಷವಾಗಿ ಗ್ರಾಮೀಣ ಹಿನ್ನಲೆಯ ನಿಷ್ಕಳಂಕ ನಡತೆಯ ಮೂವರು ಶ್ರೇಷ್ಠ ಶಿಕ್ಷಣ ತಜ್ಞರ ಪಟ್ಟಿಯಿಂದ ಕುಲಾಧಿಪತಿಗಳ ಮೂಲಕ ನೇಮಕವಾಗಿರತಕ್ಕದ್ದು. ಸದರಿ ಸಮಿತಿಯು ಈ ಮುಂದಿನ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಗಮನಾರ್ಹವಾದ ಕೊಡುಗೆಗಳನ್ನು ನೀಡಿದ ಒಬ್ಬ ವ್ಯಕ್ತಿಯು ಅಧ್ಯಕ್ಷನಾಗಿರತಕ್ಕದ್ದು;

(ii) ಕುಲಾಧಿಪತಿಗಳು ನಾಮನಿರ್ದೇಶಿಸಿದ, ಕೃಷಿ, ಗ್ರಾಮೀಣ ಜೀವನಾಧಾರ ಮತ್ತು ಸಂಬಂಧಿತ ಕ್ಷೇತ್ರಗಳಿಗೆ ಗಮನಾರ್ಹವಾದ ಕೊಡುಗೆಗಳನ್ನು ನೀಡಿದ ಒಬ್ಬ ವ್ಯಕ್ತಿ;

(iii) ವಿಶ್ವವಿದ್ಯಾಲಯ ಅನುದಾನಗಳ ಆಯೋಗದ ಅಧ್ಯಕ್ಷರು ಅಥವಾ ಅವರ ನಾಮನಿರ್ದೇಶಿತನಾದ ಒಬ್ಬ ವ್ಯಕ್ತಿ.

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರು ಶೋಧನಾ ಸಮಿತಿಯ ಸಂಚಾಲಕರಾಗಿರತಕ್ಕದ್ದು.

(2) ಶೋಧನಾ ಸಮಿತಿಯು ಸಾಧ್ಯವಾದಷ್ಟು ಮಟ್ಟಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್, ಕಾನೂನು ಸುಧಾರಣೆಗಳ ಕ್ಷೇತ್ರಗಳಲ್ಲಿ ಸಾಕಷ್ಟು ಅನುಭವ ಹೊಂದಿರುವ ನಿಷ್ಕಳಂಕ ನಡತೆಯ ಶ್ರೇಷ್ಠ ಶಿಕ್ಷಣ ತಜ್ಞರಾದ ಮೂವರು ವ್ಯಕ್ತಿಗಳ ಅಕಾರಾದಿ ಕ್ರಮದಲ್ಲಿರುವ (Alphabetical order) ಪಟ್ಟಿಯನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ರಾಜ್ಯ ಸರ್ಕಾರವು ಸದರಿ ಪಟ್ಟಿಯನ್ನು ಕುಲಾಧಿಪತಿಯವರಿಗೆ ಸಲ್ಲಿಸತಕ್ಕದ್ದು. ಅವರು ಆ ಪಟ್ಟಿಯಿಂದ ಒಬ್ಬ ವ್ಯಕ್ತಿಯನ್ನು ಕುಲಪತಿಯನ್ನಾಗಿ ನೇಮಿಸತಕ್ಕದ್ದು:

ಪರಂತು, ಪ್ರಥಮ ಕುಲಪತಿಗಳನ್ನು ಸರ್ಕಾರದ ಶಿಫಾರಸ್ಸಿನ ಮೇರೆಗೆ ಕುಲಾಧಿಪತಿಗಳು ನೇಮಿಸತಕ್ಕದ್ದು.

**ವಿವರಣೆ:** ಈ ಖಂಡದ ಉದ್ದೇಶಕ್ಕಾಗಿ "ಗ್ರಾಮೀಣಾಭಿವೃದ್ಧಿ" ಎಂದರೆ ಮತ್ತು ಅದು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಜನರ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಅಭಿವೃದ್ಧಿಯನ್ನು ಉತ್ತೇಜಿಸುವ ಅಭಿವೃದ್ಧಿ ಪ್ರಕ್ರಿಯೆ ಮತ್ತು ಇವುಗಳನ್ನು ಒಳಗೊಂಡಿದೆ, ಅದು ಈ ಮುಂದಿನ ಕ್ಷೇತ್ರೀಯ ವಿಷಯಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ನೈಸರ್ಗಿಕ ಸಂಪನ್ಮೂಲ ವ್ಯವಸ್ಥಾಪನೆ;

(ಬಿ) ಕೃಷಿ ಮತ್ತು ಕೃಷಿ ಇಂಜಿನಿಯರಿಂಗ್ ಹಾಗೂ ತೋಟಗಾರಿಕೆ;

(ಸಿ) ಅರಣ್ಯ ಮತ್ತು ಕೃಷಿ ಅರಣ್ಯ;

(ಡಿ) ಮೀನುಗಾರಿಕೆ;

(ಇ) ಪಶು, ಹೈನು ವಿಜ್ಞಾನ ಮತ್ತು ಪಶುಸಂಗೋಪನೆ;

(ಎಫ್) ರೇಷ್ಮೆ ಕೃಷಿ ಮತ್ತು ಜವಳಿ ಸಂಬಂಧಿ ಇತ್ಯಾದಿ;

(ಜಿ) ಸಾಮಾಜಿಕ ವಿಜ್ಞಾನಗಳು, ಕಾನೂನು ಇತ್ಯಾದಿ;

(ಹೆಚ್) ಗ್ರಾಮೀಣಾಭಿವೃದ್ಧಿ ಮತ್ತು ಗ್ರಾಮೀಣ ಮೂಲಸೌಕರ್ಯಗಳು;

(ಐ) ಪಂಚಾಯತ್ ರಾಜ್ ವ್ಯವಸ್ಥೆ;

(ಜೆ) ಗ್ರಾಮೀಣ ಕುಡಿಯುವ ನೀರು, ಪರಿಸರ, ಪರಿಸರ ಜೀವಶಾಸ್ತ್ರ, ನೈರ್ಮಲ್ಯತೆ ಮತ್ತು ಸಾರ್ವಜನಿಕ ಆರೋಗ್ಯ ಹಾಗೂ ಗ್ರಾಮೀಣ ವಸತಿ;

(ಕೆ) ಗ್ರಾಮೀಣ ಉದ್ಯೋಗ, ಗ್ರಾಮೀಣ ಜೀವನಾಧಾರ, ಸಣ್ಣ ಮತ್ತು ಗುಡಿ ಕೈಗಾರಿಕೆಗಳು;

(ಎಲ್) ಗ್ರಾಮೀಣ ಇಂಧನ ಮತ್ತು ನವೀಕರಿಸಬಹುದಾದ ಇಂಧನ;

(ಎಂ) ಗ್ರಾಮೀಣ ಪ್ರದೇಶದಲ್ಲಿ ಸಮುದಾಯ ಪಾಲ್ಗೊಳ್ಳುವಿಕೆ ಮತ್ತು ಸಹಭಾಗಿತ್ವ ಅಭಿವೃದ್ಧಿ.

(ಎನ್) ಬುಡಕಟ್ಟು ಅಥವಾ ಗ್ರಾಮೀಣ ಅಭಿವೃದ್ಧಿಗಾಗಿ ಕಾರ್ಯವಹಿಸುವುದು ಮತ್ತು ಗ್ರಾಮೀಣ ಪ್ರದೇಶಗಳ ಪ್ರಯೋಜನಕ್ಕಾಗಿ ತಂತ್ರಜ್ಞಾನ ಅಭಿವೃದ್ಧಿ.

(3) ಕುಲಪತಿಗಳು ಶೈಕ್ಷಣಿಕ ವ್ಯಕ್ತಿ ಮತ್ತು ಪ್ರಾಧ್ಯಾಪಕರಾಗಿರತಕ್ಕದ್ದು, ಅವರು ನಾಲ್ಕು ವರ್ಷಗಳ ಅವಧಿಯವರೆಗೆ ಅಥವಾ ಅವರ ವಯಸ್ಸು ಅರವತ್ತೈದು ವರ್ಷವಾಗುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಹುದ್ದೆಯನ್ನು ಹೊಂದಿರತಕ್ಕದ್ದು.

(4) ಕುಲಪತಿಯವರನ್ನು, ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವುದನ್ನು ಉದ್ದೇಶಪೂರ್ವಕವಾಗಿ ಕೈಬಿಟ್ಟಿದ್ದಾರೆ ಅಥವಾ ಕಾರ್ಯಗತಗೊಳಿಸಲು ನಿರಾಕರಿಸಿದ್ದಾರೆ ಅಥವಾ ಅವರಲ್ಲಿ ನಿಹಿತವಾದ, ಅಧಿಕಾರಗಳನ್ನು ದುರುಪಯೋಗಪಡಿಸಿಕೊಂಡಿದ್ದಾರೆ ಎಂಬ ಕಾರಣದ ಮೇಲೆ ಮತ್ತು ರಾಜ್ಯ ಸರ್ಕಾರವು (5)ನೇ ಉಪ ಪ್ರಕರಣದ ಅಡಿಯಲ್ಲಿ ತಾನು ಆದೇಶಿಸಿದ್ದ ಒಂದು ವಿಚಾರಣೆಯ ವರದಿಯನ್ನು ಪರಿಗಣಿಸಿದ ನಂತರ ನೀಡಿದ ಸಲಹೆಯ ಮೇಲೆ ಕುಲಾಧಿಪತಿಯವರು ಹೊರಡಿಸಿದ ಆದೇಶದ ಮೂಲಕವಾಗಿ ಅಲ್ಲದೆ, ಅವರ ಅಧಿಕಾರಸ್ಥಾನದಿಂದ ತೆಗೆದುಹಾಕತಕ್ಕದ್ದಲ್ಲ.

(5) ಈ ಪ್ರಕರಣದ ಅಡಿಯಲ್ಲಿ ಒಂದು ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ, ರಾಜ್ಯ ಸರ್ಕಾರವು, ಉಚ್ಚ ನ್ಯಾಯಾಲಯದ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು. ವಿಚಾರಣಾ ಪ್ರಾಧಿಕಾರವು, ಕುಲಪತಿಯವರಿಗೆ ತಮ್ಮ ಮನವಿಯನ್ನು ಸಲ್ಲಿಸಲು ಅವಕಾಶ ನೀಡಿದ ನಂತರ ವಿಚಾರಣೆ ನಡೆಸತಕ್ಕದ್ದು ಮತ್ತು ವಿಧಿಸಬೇಕಾದ ಯಾವುದೇ ದಂಡನೆ ಇದ್ದರೆ, ಅದೂ ಒಳಗೊಂಡಂತೆ ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ಒಂದು ವರದಿಯನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ರಾಜ್ಯಸರ್ಕಾರವು, ವರದಿಯನ್ನು ಪರಿಶೀಲಿಸಿದ ನಂತರ, ಕುಲಾಧಿಪತಿಯವರಿಗೆ ಸಲಹೆ ನೀಡತಕ್ಕದ್ದು. ಕುಲಾಧಿಪತಿಯವರು ಸಾಧ್ಯವಾದಷ್ಟುಮಟ್ಟಿಗೆ ಆರು ತಿಂಗಳೊಳಗಾಗಿ ಅಂಥ ಸಲಹೆಗೆ ಅನುಸಾರವಾಗಿ ಕ್ರಮ ಕೈಗೊಳ್ಳತಕ್ಕದ್ದು.

(6) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಕುಲಾಧಿಪತಿಯವರು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದ್ದಲ್ಲ. ಕುಲಪತಿಯಾಗಿ ತಮ್ಮ ಅಧಿಕಾರಾವಧಿಯಲ್ಲಿರುವಾಗ ಕುಲಪತಿಯವರು ವಯೋನಿವೃತ್ತಿಯ ಮೇಲೆ ನಿವೃತ್ತರಾಗುವ ಸಂದರ್ಭದಲ್ಲಿ, ಈಗಾಗಲೇ ನಿರ್ಧರಿಸಲಾದ ಅವರ ಸೇವಾ ಷರತ್ತುಗಳು ಮುಂದುವರಿಯತಕ್ಕದ್ದು. ಅವರ ಎಲ್ಲ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯತಕ್ಕದ್ದು, ಅವುಗಳನ್ನು ಅವರು ಕುಲಪತಿಯಾಗಿ ತಮ್ಮ ಅಧಿಕಾರ ಸ್ಥಾನವನ್ನು ತ್ಯಜಿಸಿದ ನಂತರ ಬಿಡುಗಡೆ ಮಾಡತಕ್ಕದ್ದು.

(7) ಕುಲಪತಿಯವರು ಕುಲಾಧಿಪತಿಯವರಿಗೆ ರಾಜೀನಾಮೆ ಪತ್ರವನ್ನು ಬರೆದು ಅದಕ್ಕೆ ತನ್ನ ಸಹಿ ಹಾಕಿ ತಾನು ಬಿಡುಗಡೆಗೊಳ್ಳಲು ಇಚ್ಛಿಸುವ ದಿನಾಂಕದಿಂದ ಸಾಮಾನ್ಯವಾಗಿ ಅರವತ್ತು ದಿನಗಳಿಗೆ ಮೊದಲು ಅದನ್ನು ಕುಲಾಧಿಪತಿಯವರಿಗೆ ಕಳುಹಿಸುವ ಮೂಲಕ ತನ್ನ ಸ್ಥಾನವನ್ನು ತ್ಯಜಿಸಬಹುದು. ಆದರೆ ಕುಲಾಧಿಪತಿಯವರು ಅವರನ್ನು ಅದಕ್ಕೂ ಮೊದಲೇ ಬಿಡುಗಡೆಗೊಳಿಸಬಹುದು.

(8) ನಿವೃತ್ತರಾದ ಒಬ್ಬ ವ್ಯಕ್ತಿಯು, ಕುಲಪತಿಯಾಗಿ ನೇಮಕಗೊಂಡರೆ, ಅವರು ಕುಲಪತಿಯಾಗಿ ನೇಮಕಗೊಂಡ ಮೇಲೆ, ಅವರ ಉಪಲಬ್ಧಿಗಳೂ ಸೇರಿದಂತೆ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಕುಲಾಧಿಪತಿಯವರು ನಿರ್ಣಯಿಸತಕ್ಕದ್ದು. ಅವರು ಪಡೆಯುವ ನಿವೃತ್ತಿ ವೇತನದ ಮೊತ್ತವನ್ನು ಮತ್ತು ಭತ್ಯಗಳನ್ನು ಅವರ ಉಪಲಬ್ಧಿಗಳಿಂದ ಕಳೆಯತಕ್ಕದ್ದು.

(9) ರಾಜ್ಯದಲ್ಲಿನ ಒಂದು ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಒಬ್ಬ ಪ್ರಾಧ್ಯಾಪಕರು, ಕುಲಪತಿಯಾಗಿ ನೇಮಕ ಮಾಡಿದರೆ, ಅವರು ಕುಲಪತಿಯಾಗಿರುವ ಅಧಿಕಾರಾವಧಿಯಲ್ಲಿ ಪ್ರಾಧ್ಯಾಪಕರಾಗಿ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಅವರಿಗೆ ಅನಾನುಕೂಲವಾಗುವಂತೆ ಪರಿಷ್ಕರಿಸತಕ್ಕದ್ದಲ್ಲ ಮತ್ತು ಸೇವಾಜೇಷ್ಠತೆ (lien) ಅವರ ಮೂಲ ಹುದ್ದೆಯಲ್ಲಿ ಹಾಗೆಯೇ ಉಳಿಸತಕ್ಕದ್ದು.

**16. ಕುಲಪತಿಯವರ ಅಧಿಕಾರಗಳು.**- (1) ಕುಲಪತಿಯವರು, ವಿಶ್ವವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ಅಧಿಕಾರಿ ಮತ್ತು ಶೈಕ್ಷಣಿಕ ವಿಷಯಗಳ ಮುಖ್ಯಸ್ಥರಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ವ್ಯವಹಾರಗಳ ಮೇಲ್ವಿಚಾರಣೆ ಹಾಗೂ ನಿಯಂತ್ರಣವನ್ನು ನಡೆಸತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳ ತೀರ್ಮಾನಗಳನ್ನು ಜಾರಿಗೊಳಿಸತಕ್ಕದ್ದು. ವಿಶ್ವವಿದ್ಯಾಲಯದಲ್ಲಿ ಶಿಸ್ತುಪಾಲನೆಗೆ ಅವಶ್ಯವಾದ ಎಲ್ಲಾ ಅಧಿಕಾರಗಳನ್ನು ಅವರು ಹೊಂದಿರತಕ್ಕದ್ದು.

(2) ಕುಲಪತಿಯವರು,-

(ಎ) ಈ ಅಧಿನಿಯಮ, ವಿನಿಯಮ ಮತ್ತು ಪರ್ಯಾದೇಶಗಳ ಉಪಬಂಧಗಳನ್ನು ಯುಕ್ತವಾಗಿ ಪಾಲಿಸಿರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು ಮತ್ತು ಆ ಉದ್ದೇಶಗಳಿಗಾಗಿ ಅವಶ್ಯಕವಿರುವ ಎಲ್ಲಾ ಅಧಿಕಾರಗಳನ್ನು ಅವರು ಹೊಂದಿರತಕ್ಕದ್ದು;

(ಬಿ) ಕುಲಪತಿಯವರು, ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್ತು ಮತ್ತು ಹಣಕಾಸು ಸಮಿತಿಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು;

(ಸಿ) ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್ತು ಮತ್ತು ಇತರ ಪರಿಷತ್ತುಗಳು ಹಾಗೂ ಸಮಿತಿಗಳ ಸಭೆಗಳನ್ನು ನಡೆಸುವುದು ಮತ್ತು ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅವಶ್ಯಕವಿರಬಹುದಾದ ಎಲ್ಲಾ ಇತರ ಕಾರ್ಯಗಳನ್ನು ನೆರವೇರಿಸತಕ್ಕದ್ದು ಹಾಗೂ ಯಾವುದೇ ಸದರಿ ಸಭೆಗಳನ್ನು ಕರೆಯಲು ವಿಶ್ವವಿದ್ಯಾಲಯದ ಯಾವುದೇ ಇತರ ಅಧಿಕಾರಿಗೆ ಅಧಿಕಾರವನ್ನು ಲಿಖಿತದಲ್ಲಿನ ಆದೇಶದ ಮೂಲಕ ಪ್ರತ್ಯಾಯೋಜಿಸಬಹುದು;

(ಡಿ) ವಿಶ್ವವಿದ್ಯಾಲಯದಲ್ಲಿ ಶೈಕ್ಷಣಿಕ, ಆಡಳಿತ ಮತ್ತು ಹಣಕಾಸು ವಿಷಯಗಳ ಸಮರ್ಪಕ ನಿರ್ವಹಣೆಗೆ ಸಂಬಂಧಿಸಿದ ಎಲ್ಲಾ ಅಧಿಕಾರಗಳನ್ನು ಹೊಂದಿರತಕ್ಕದ್ದು.

(3) ಕುಲಪತಿಯವರು,-

(ಎ) ವಿಶ್ವವಿದ್ಯಾಲಯದ ಸೂಕ್ತ ಆಡಳಿತ ಮತ್ತು ನಿಕಟ ಸಹಕಾರ ಹಾಗೂ ಬೋಧನಾಏಕತೆ, ಸಂಶೋಧನೆ ಮತ್ತು ಜ್ಞಾನ ಪ್ರಸರಣಕ್ಕಾಗಿ;

(ಬಿ) ಕಾರ್ಯನಿರ್ವಾಹಕ ಪರಿಷತ್ತಿಗೆ ವಾರ್ಷಿಕ ಆರ್ಥಿಕ ಅಂದಾಜುಗಳು ಮತ್ತು ವಾರ್ಷಿಕ ಲೆಕ್ಕಪತ್ರಗಳು ಹಾಗೂ ಲೆಕ್ಕಾಚಾರ ತಃಖ್ತೆಯನ್ನು ನೀಡುವುದಕ್ಕಾಗಿ;

-ಹೊಣೆಗಾರರಾಗಿರತಕ್ಕದ್ದು.

(4) ಕುಲಪತಿಯವರ ಅಭಿಪ್ರಾಯದಲ್ಲಿ ತಕ್ಷಣ ಕ್ರಮ ತೆಗೆದುಕೊಳ್ಳುವ ತುರ್ತುಪರಿಸ್ಥಿತಿಯು ಉದ್ಭವಿಸಿದಲ್ಲಿ, ಅವರು ಅಗತ್ಯವೆಂದು ಭಾವಿಸುವಂಥ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು ಹಾಗೂ ಅದನ್ನು ಅನುಮೋದನೆಗಾಗಿ ಸಾಮಾನ್ಯ ಸಂದರ್ಭದಲ್ಲಿ ಸದರಿ ವಿಷಯವನ್ನು ವ್ಯವಹರಿಸುವ ಕಾರ್ಯನಿರ್ವಾಹಕ ಪರಿಷತ್ತು ಅಥವಾ ಶೈಕ್ಷಣಿಕ ಪರಿಷತ್ತಿನ ಮುಂದಿನ ಸಭೆಯಲ್ಲಿ ವರದಿ ಮಾಡತಕ್ಕದ್ದು:

ಪರಂತು, ಸಂಬಂಧಪಟ್ಟ ಕಾರ್ಯನಿರ್ವಾಹಕ ಪರಿಷತ್ತು ಅಥವಾ ಶೈಕ್ಷಣಿಕ ಪರಿಷತ್ತು ಅಂಥ ಕ್ರಮವನ್ನು ತೆಗೆದುಕೊಳ್ಳಬಾರದಿತ್ತು ಎಂದು ಅಭಿಪ್ರಾಯಪಟ್ಟರೆ, ಆ ವಿಷಯವನ್ನು ಕುಲಾಧಿಪತಿಗಳಿಗೆ ಕಳುಹಿಸತಕ್ಕದ್ದು, ಅದಕ್ಕೆ ಅದರ ನಿರ್ಣಯವು ಅಂತಿಮವಾಗಿರತಕ್ಕದ್ದು.

**17. ಕುಲಪತಿಯವರ ಸ್ಥಾನವು ಖಾಲಿಯಿರುವಾಗ ಕೆಲಸದ ವ್ಯವಸ್ಥೆ.**- (1) ರಜೆ, ಖಾಯಿಲೆ ಅಥವಾ ಇನ್ನಾವುದೇ ಕಾರಣದಿಂದಾಗಿ ಕುಲಪತಿಯವರ ತಾತ್ಕಾಲಿಕ ಗೈರುಹಾಜರಿಯಲ್ಲಿ, ಕುಲಾಧಿಪತಿಯವರು, ಕುಲಪತಿಯವರ ಕರ್ತವ್ಯಗಳನ್ನು ನಡೆಸಿಕೊಂಡು ಹೋಗುವುದಕ್ಕೆ ತಾವು ಸೂಕ್ತವೆಂದು ಭಾವಿಸುವಂಥ ವ್ಯವಸ್ಥೆಯನ್ನು ಮಾಡಬಹುದು:

ಪರಂತು, ಕುಲಾಧಿಪತಿಯವರು ಅಂಥ ವ್ಯವಸ್ಥೆಯನ್ನು ಮಾಡುವವರೆಗೆ ಕುಲಪತಿಯವರು ಒಂದು ತಿಂಗಳು ಮೀರದಂಥ ಅವಧಿಗೆ ಅಥವಾ ಕುಲಾಧಿಪತಿಯವರು ವ್ಯವಸ್ಥೆ ಮಾಡುವವರೆಗೆ, ಅವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ವಿಶ್ವವಿದ್ಯಾಲಯದಲ್ಲಿ ಇರುವಂಥ ನಿರ್ದೇಶಕರು, ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ ಅಥವಾ ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಇವರುಗಳ ಪೈಕಿ ಅತ್ಯಂತ ಹಿರಿಯ ನಿರ್ದೇಶಕರನ್ನು ಕುಲಪತಿಯವರ ಪ್ರಸಕ್ತ ಕರ್ತವ್ಯಗಳ ಪ್ರಭಾರವಹಿಸಲು ಹೆಸರಿಸಬಹುದು.

(2) ಕುಲಪತಿಯವರ ಸ್ಥಾನವು ಭರ್ತಿಯಾಗದೆ ಖಾಲಿ ಉಳಿದಿರುವ ಅವಧಿಯವರೆಗೆ, ಕುಲಾಧಿಪತಿಯವರು ನೇಮಿಸಬಹುದಾದಂಥ, ವಿಶ್ವವಿದ್ಯಾಲಯದಲ್ಲಿಯ ನಿರ್ದೇಶಕರು, ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ ಅಥವಾ ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಇವರುಗಳ ಪೈಕಿ ಅತ್ಯಂತ ಹಿರಿಯ ನಿರ್ದೇಶಕರು ಕುಲಪತಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಮತ್ತು ಹಾಗೆ ನೇಮಕಗೊಂಡ ವ್ಯಕ್ತಿಯು, ಕುಲಪತಿಯವರ ಎಲ್ಲಾ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಎಲ್ಲಾ ವಿಶೇಷಾಧಿಕಾರಗಳಿಗೂ ಹಾಗೂ ಈ ಕುರಿತು ರಚಿಸಲಾದ ವಿನಿಯಮಗಳಾವುವಾದರೂ ಇದ್ದಲ್ಲಿ, ಅವುಗಳಿಗನ್ವಯ ಕುಲಾಧಿಪತಿಯವರು ನಿರ್ಧರಿಸಬಹುದಾದಂಥ ಉಪಲಬ್ಧಿಗಳು ಮತ್ತು ಭತ್ಯೆಗಳಿಗೂ ಹಕ್ಕುಳ್ಳವರಾಗಿರತಕ್ಕದ್ದು.

**18. ಕುಲಸಚಿವರು.–** (1) ಕುಲಸಚಿವರು ವಿಶ್ವವಿದ್ಯಾಲಯದ ಪೂರ್ಣಾವಧಿ ಅಧಿಕಾರಿಯಾಗಿರತಕ್ಕದ್ದು. ಕುಲಸಚಿವರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ವಿನಿಯಮಗಳಲ್ಲಿ ನಿಯಮಿಸಬಹುದಾದಂತೆ ಇರತಕ್ಕದ್ದು.

(2) ರಾಜ್ಯ ಸರ್ಕಾರವು ಕರ್ನಾಟಕ ಆಡಳಿತ ಸೇವೆ (ಹಿರಿಯ ಶ್ರೇಣಿ)ಗೆ ಸೇರಿದ ಒಬ್ಬ ಅಧಿಕಾರಿ ಅಥವಾ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿನ ತತ್ಸಮಾನ ದರ್ಜೆಯ ಒಬ್ಬ ಅಧಿಕಾರಿ ಅಥವಾ ಯಾವುದೇ ವಿಶ್ವವಿದ್ಯಾಲಯದ ಪ್ರಾಧ್ಯಾಪಕರನ್ನು ಕುಲಸಚಿವರನ್ನಾಗಿ ನೇಮಿಸಬಹುದು.

(3) ಕುಲಸಚಿವರು ಕಾರ್ಯನಿರ್ವಾಹಕ ಪರಿಷತ್ತು ಮತ್ತು ಶೈಕ್ಷಣಿಕ ಪರಿಷತ್ತುಗಳ ಪದನಿಮಿತ್ತ ಸದಸ್ಯ–ಕಾರ್ಯದರ್ಶಿ ಹಾಗೂ ಹಣಕಾಸು ಸಮಿತಿ ಮತ್ತು ವ್ಯಾಸಂಗ ವಿಭಾಗಗಳ ಸದಸ್ಯರಾಗಿರತಕ್ಕದ್ದು.

(4) ಕುಲಸಚಿವರು,–

(i) ಕಾರ್ಯನಿರ್ವಾಹಕ ಪರಿಷತ್ತಿನ ಮತ್ತು ಕುಲಪತಿಗಳ ಎಲ್ಲಾ ನಿರ್ದೇಶನ ಮತ್ತು ಆದೇಶಗಳನ್ನು ಪಾಲಿಸತಕ್ಕದ್ದು;

(ii) ಕಾರ್ಯನಿರ್ವಾಹಕ ಪರಿಷತ್ತು ಅವರ ಪ್ರಭಾರಕ್ಕೆ ಒಪ್ಪಿಸಿದಂಥ ವಿಶ್ವವಿದ್ಯಾಲಯದ ದಾಖಲೆಗಳು, ಸಾಮಾನ್ಯ ಮೊಹರು ಮತ್ತು ಅಂಥ ಇತರ ಸ್ವತ್ತುಗಳ ಅಭಿರಕ್ಷರಾಗಿರತಕ್ಕದ್ದು;

(iii) ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್, ಹಣಕಾಸು ಸಮಿತಿ, ವ್ಯಾಸಂಗ ವಿಭಾಗಗಳ ಪರಿಷತ್ತು ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳು ನೇಮಿಸಿದ ಯಾವುದೇ ಸಮಿತಿಯ ಸಭೆಯನ್ನು ಕರೆಯಲು ಕುಲಪತಿಗಳು ನಿರ್ದೇಶಿಸಿದಂತೆ, ಸಭಾ ಸೂಚನಾ ಪತ್ರಗಳನ್ನು ಹೊರಡಿಸತಕ್ಕದ್ದು;

(iv) ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್ತು, ಹಣಕಾಸು ಸಮಿತಿ, ವ್ಯಾಸಂಗ ವಿಭಾಗಗಳು ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳು ನೇಮಿಸಿದ ಯಾವುದೇ ಸಮಿತಿಯ ಎಲ್ಲಾ ಸಭೆಗಳ ನಡವಳಿಗಳನ್ನು ಇಡತಕ್ಕದ್ದು;

(v) ಕಾರ್ಯನಿರ್ವಾಹಕ ಪರಿಷತ್ತು ಮತ್ತು ಶೈಕ್ಷಣಿಕ ಪರಿಷತ್ತಿನ ಅಧಿಕೃತ ಪತ್ರವ್ಯವಹಾರಗಳನ್ನು ನಿರ್ವಹಿಸತಕ್ಕದ್ದು;

(vi) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಸಭೆಗಳ ಚರ್ಚಾ ವಿಷಯಗಳ ಪ್ರತಿಗಳನ್ನು, ಅವುಗಳನ್ನು ಹೊರಡಿಸಿದ ಕೂಡಲೇ, ಕುಲಾಧಿಪತಿಗಳಿಗೆ ಒದಗಿಸತಕ್ಕದ್ದು ಮತ್ತು ಪ್ರಾಧಿಕಾರಗಳ ಸಭೆಗಳ ನಡವಳಿಗಳನ್ನು, ಸಾಮಾನ್ಯವಾಗಿ ಸಭೆಗಳನ್ನು ನಡೆಸಿದ ಒಂದು ತಿಂಗಳ ಒಳಗಾಗಿ ಒದಗಿಸತಕ್ಕದ್ದು;

(vii) ತಮ್ಮ ಕರ್ತವ್ಯಗಳು ಮತ್ತು ಪ್ರಕಾರ್ಯಗಳ ಸಮರ್ಪಕ ನಿರ್ವಹಣೆಗಾಗಿ ಕುಲಪತಿಗಳಿಗೆ ನೇರವಾಗಿ ಹೊಣೆಯಾಗಿರತಕ್ಕದ್ದು; ಮತ್ತು

(viii) ಕಾರ್ಯನಿರ್ವಾಹಕ ಪರಿಷತ್ ಅಥವಾ ಕುಲಪತಿಗಳು ಕಾಲಕಾಲಕ್ಕೆ ವಹಿಸಬಹುದಾದಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(5) ವಿಶ್ವವಿದ್ಯಾಲಯದಿಂದ ಅಥವಾ ಅದರ ವಿರುದ್ಧವಾಗಿ ಹೂಡುವ ದಾವೆಗಳಲ್ಲಿ ಅಥವಾ ನಡವಳಿಗಳಲ್ಲಿ ವಿಶ್ವವಿದ್ಯಾಲಯವನ್ನು ಪ್ರತಿನಿಧಿಸುವುದು, ಮುಖ್ತ್ಯಾರನಾಮೆಗೆ ಸಹಿ ಹಾಕುವುದು ಹಾಗೂ ವಾದಪತ್ರಗಳನ್ನು ಪರಿಶೀಲಿಸುವುದು ಅಥವಾ ಈ ಉದ್ದೇಶಕ್ಕಾಗಿ ಪ್ರತಿನಿಧಿಗಳನ್ನು ನಿಯೋಜಿಸತಕ್ಕದ್ದು.

(6) ಯಾವುದೇ ಕಾರಣಕ್ಕೆ ಕುಲಸಚಿವರ ಹುದ್ದೆಯು ತೆರವಾಗಿ ಉಳಿದ ಸಂದರ್ಭಗಳಲ್ಲಿ, ಕುಲಪತಿಗಳು ಸೂಕ್ತವೆಂದು ಭಾವಿಸುವಂಥ, ಕುಲಸಚಿವರ ಅಧಿಕಾರ, ಪ್ರಕಾರ್ಯ ಮತ್ತು ಕರ್ತವ್ಯಗಳನ್ನು ನಿರ್ವಹಿಸಲು, ಸರ್ಕಾರವು ಕ್ರಮಬದ್ಧ ಕುಲಸಚಿವರನ್ನು ನೇಮಕ ಮಾಡುವವರೆಗೆ ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಹಿರಿಯ ಪ್ರಾಧ್ಯಾಪಕರುಗಳ ಪೈಕಿಯಿಂದ ಒಬ್ಬ ವ್ಯಕ್ತಿಗೆ ಅಧಿಕಾರವನ್ನು ನೀಡಲು ಮುಕ್ತವಾಗಿರತಕ್ಕದ್ದು.

(7) ಕುಲಸಚಿವರಿಗೆ ಒಬ್ಬರು ಅಥವಾ ಹೆಚ್ಚಿನ ಉಪಕುಲಸಚಿವರು, ಸಹಾಯಕ ಕುಲಸಚಿವರು ಮತ್ತು ವಿಶೇಷ ಅಧಿಕಾರಿಗಳು ನೆರವು ನೀಡಬಹುದು.

**19. ಶಾಲೆಗಳ ನಿರ್ದೇಶಕರು ಮತ್ತು ಮುಖ್ಯಸ್ಥರು.–** (1) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆಗೆ ಒಬ್ಬ ನಿರ್ದೇಶಕರು ಇರತಕ್ಕದ್ದು.

(2) ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರಕ್ಕಾಗಿ ಒಬ್ಬ ನಿರ್ದೇಶಕರು ಇರತಕ್ಕದ್ದು.

(3) ವಿಶ್ವವಿದ್ಯಾಲಯದಲ್ಲಿನ ಪ್ರತಿಯೊಂದು ಶಾಲೆಗಳಿಗಾಗಿ ಶಾಲಾ ಮುಖ್ಯಸ್ಥರುಗಳು ಇರತಕ್ಕದ್ದು.

(4) ಶಾಲೆಗಳ ನಿರ್ದೇಶಕರು ಮತ್ತು ಮುಖ್ಯಸ್ಥರ ಅಧಿಕಾರಗಳು, ಪ್ರಕಾರ್ಯಗಳು, ನೇಮಕಾತಿಗಳು ಹಾಗೂ ಸೇವಾಷರತ್ತುಗಳು ವಿನಿಯಮಗಳಲ್ಲಿ ನಿಯಮಿಸಿರುವಂತೆ ಇರತಕ್ಕದ್ದು.

**20. ಹಣಕಾಸು ಅಧಿಕಾರಿ.–** ವಿಶ್ವವಿದ್ಯಾಲಯದಲ್ಲಿ ಒಬ್ಬ ಹಣಕಾಸು ಅಧಿಕಾರಿಯಿರತಕ್ಕದ್ದು. ಅವನು ವಿಶ್ವವಿದ್ಯಾಲಯದ ಪೂರ್ಣಾವಧಿ ಅಧಿಕಾರಿಯಾಗಿರತಕ್ಕದ್ದು ಆತನನ್ನು ರಾಜ್ಯಸರ್ಕಾರವು ರಾಜ್ಯ ಲೆಕ್ಕಪತ್ರ ಸೇವೆಗಳ ಉಪ ಅಥವಾ ಜಂಟಿ ನಿಯಂತ್ರಕರ ದರ್ಜೆಯ ಅಧಿಕಾರಿಗಳು ಅಥವಾ ಕಾರ್ಯನಿರ್ವಾಹಕ ಪರಿಷತ್ತು ಶಿಫಾರಸ್ಸು ಮಾಡುವ ಲೆಕ್ಕಪರಿಶೋಧನೆ, ಲೆಕ್ಕಪತ್ರ ನಿರ್ವಹಣೆ ಮತ್ತು ಆರ್ಥಿಕ ಆಡಳಿತದಲ್ಲಿ ಅನುಭವ ಹೊಂದಿರುವ ಉಪಮಹಾಲೇಖಪಾಲನ ದರ್ಜೆಯ ಒಬ್ಬ ಅಧಿಕಾರಿ ಇರುವ ಮೂರು ವ್ಯಕ್ತಿಗಳಿಗಿಂತ ಕಡಿಮೆಯಿಲ್ಲದ ಪಟ್ಟಿಯಿಂದ ಈ ಕುರಿತು ಸರ್ಕಾರವು ನಿರ್ದಿಷ್ಟಪಡಿಸಬಹುದಾದ ಅಂಥ ಅವಧಿಗಾಗಿ ನೇಮಿಸುವುದು.

**21. ಹಣಕಾಸು ಅಧಿಕಾರಿ ಸೇವೆಯ ಷರತ್ತು ಮತ್ತು ನಿಬಂಧನೆಗಳು.–** (1) ಹಣಕಾಸು ಅಧಿಕಾರಿಯ ಸಂಭಾವನೆ ಮತ್ತು ಇನ್ನಿತರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾಂತೆ ಇರತಕ್ಕದ್ದು. ಅರವತ್ತು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸಿದ ಮೇಲೆ ಹಣಕಾಸು ಅಧಿಕಾರಿಯು ಸೇವೆಯಿಂದ ನಿವೃತ್ತನಾಗತಕ್ಕದ್ದು.

(2) ಹಣಕಾಸು ಅಧಿಕಾರಿಯ ಹುದ್ದೆಯು ತೆರವಾದಾಗ ಅಥವಾ ಹಣಕಾಸು ಅಧಿಕಾರಿಯ ಅನಾರೋಗ್ಯದ ನಿಮಿತ್ತ ಗೈರುಹಾಜರಾದಾಗ ಅಥವಾ ಇನ್ನಿತರ ಕಾರಣಗಳಿಗಾಗಿ ತನ್ನ ಕಛೇರಿಯ ಕರ್ತವ್ಯಗಳನ್ನು ನಿರ್ವಹಿಸಲು ಅಶಕ್ತನಾದಾಗ, ಕುಲಪತಿಗಳು ಈ ಉದ್ದೇಶಕ್ಕಾಗಿ ನೇಮಿಸಬಹುದಾದಂತಹ ವ್ಯಕ್ತಿಯು ಹಣಕಾಸು ಅಧಿಕಾರಿಯ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

(3) ಹಣಕಾಸು ಅಧಿಕಾರಿಯು ಶೈಕ್ಷಣಿಕ ಪರಿಷತ್ತಿನ ಪದನಿಮಿತ್ತ ಸದಸ್ಯನಾಗಿರತಕ್ಕದ್ದು ಮತ್ತು ಹಣಕಾಸು ಸಮಿತಿಯ ಪದನಿಮಿತ್ತ ಸದಸ್ಯ–ಕಾರ್ಯದರ್ಶಿಯಾಗಿರತಕ್ಕದ್ದು, ಆದರೆ ಸಮಿತಿಯ ಸದಸ್ಯನೆಂದು ಪರಿಭಾವಿಸತಕ್ಕದ್ದಲ್ಲ.

(4) **(ಎ)** ಹಣಕಾಸು ಅಧಿಕಾರಿಯು ವಿಶ್ವವಿದ್ಯಾಲಯದ ನಿಧಿಗಳ ಕುರಿತಾಗಿ ಸಾಮಾನ್ಯ ನಿಗಾವಣೆ ವಹಿಸತಕ್ಕದ್ದು ಮತ್ತು ಹಣಕಾಸು ನೀತಿಗಳ ಕುರಿತು ವಿಶ್ವವಿದ್ಯಾಲಯಕ್ಕೆ ಸಲಹೆಗಳನ್ನು ನೀಡತಕ್ಕದ್ದು; ಮತ್ತು

**(ಬಿ)** ನಿಯಮಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**22. ಗ್ರಂಥಪಾಲಕರು.–** ಗ್ರಂಥಪಾಲಕರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ನೌಕರನಾಗಿರತಕ್ಕದ್ದು ಮತ್ತು ಅವರನ್ನು ಈ ಅಧಿನಿಯಮ ಅಥವಾ ವಿನಿಯಮಗಳ ಅಡಿಯಲ್ಲಿ ರಚಿಸಲಾದ ಆಯ್ಕೆ ಸಮಿತಿಯ ಶಿಫಾರಸ್ಸಿನ ಮೇಲೆ ಕಾರ್ಯನಿರ್ವಾಹಕ ಪರಿಷತ್ತು ನೇಮಿಸತಕ್ಕದ್ದು. ಅವನು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಅರ್ಹತೆಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು. ಅವರ ಉಪಲಬ್ಧಿಗಳು ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ವಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

**23. ದೈಹಿಕ ಶಿಕ್ಷಣದ ನಿರ್ದೇಶಕರು.–** ದೈಹಿಕ ಶಿಕ್ಷಣದ ನಿರ್ದೇಶಕರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಈ ಅಧಿನಿಯಮ ಅಥವಾ ವಿನಿಯಮಗಳ ಅಡಿಯಲ್ಲಿ ರಚಿಸಲಾದ ಆಯ್ಕೆ ಸಮಿತಿಯ ಶಿಫಾರಸ್ಸಿನ ಮೇಲೆ ಕಾರ್ಯನಿರ್ವಾಹಕ ಪರಿಷತ್ತು ನೇಮಿಸತಕ್ಕದ್ದು. ಅವರು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಅರ್ಹತೆಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು. ಅವರ ಉಪಲಬ್ಧಿಗಳು ಮತ್ತು ಸೇವಾ ನಿಬಂಧನೆಗಳು ಹಾಗೂ ಷರತ್ತುಗಳು ವಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

## ಅಧ್ಯಾಯ – IV

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**24. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಈ ಮುಂದಿನವುಗಳು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು,–

(1) ಕಾರ್ಯನಿರ್ವಾಹಕ ಪರಿಷತ್ತು;

(2) ಶೈಕ್ಷಣಿಕ ಪರಿಷತ್ತು;

(3) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ ಕೇಂದ್ರ;

(4) ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ;

(5) ವ್ಯಾಸಂಗ ವಿಭಾಗ ಪರಿಷತ್ತು;

(6) ಹಣಕಾಸು ಸಮಿತಿ; ಮತ್ತು

(7) ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಇತರ ಪ್ರಾಧಿಕಾರಗಳು.

**25. ಕಾರ್ಯನಿರ್ವಾಹಕ ಪರಿಷತ್ತು.–** (1) ಕಾರ್ಯನಿರ್ವಾಹಕ ಪರಿಷತ್ತು, ವಿಶ್ವವಿದ್ಯಾಲಯದ ಮುಖ್ಯ ಆಡಳಿತ ಮತ್ತು ನಿರ್ವಾಹಕ ಮಂಡಳಿಯಾಗಿರತಕ್ಕದ್ದು.

(2) ವಿಶ್ವವಿದ್ಯಾಲಯದ ಆಡಳಿತ, ವ್ಯವಸ್ಥಾಪನೆ ಮತ್ತು ನಿಯಂತ್ರಣ ಹಾಗೂ ಅದರ ಆದಾಯವು, ಕಾರ್ಯನಿರ್ವಾಹಕ ಪರಿಷತ್ತಿನಲ್ಲಿ ನಿಹಿತವಾಗಿರುವುದು. ಅದು ವಿಶ್ವವಿದ್ಯಾಲಯದ ಆಸ್ತಿ ಮತ್ತು ನಿಧಿಗಳನ್ನು ನಿಯಂತ್ರಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

**26. ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರು.–** ಕಾರ್ಯನಿರ್ವಾಹಕ ಪರಿಷತ್ತು ಕುಲಾಧಿಪತಿಯವರ ಮೂಲಕ ಮೂರು ವರ್ಷಗಳಿಗೊಮ್ಮೆ ಪುನಾರಚನೆಗೊಳ್ಳತಕ್ಕದ್ದು ಮತ್ತು ಅದು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಕುಲಪತಿಗಳು -- ಅಧ್ಯಕ್ಷರು;

(ಬಿ) ಕುಲಾಧಿಪತಿಗಳು ನಾಮನಿರ್ದೇಶಿಸಿದ ಒಬ್ಬ ಸದಸ್ಯರು;

(ಸಿ) ಕುಲಾಧಿಪತಿಗಳು ನಾಮನಿರ್ದೇಶಿಸಿದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ ಅಥವಾ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಅಥವಾ ಪಶುಸಂಗೋಪನೆ, ಪಶು ಮತ್ತು ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಒಬ್ಬ ಕುಲಪತಿಗಳು;

(ಡಿ) ಕುಲಾಧಿಪತಿಗಳು ನಾಮನಿರ್ದೇಶಿಸಿದ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಅಥವಾ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ಅಥವಾ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಇಂತಹ, ವೃತ್ತಿಪರ ವಿಶ್ವವಿದ್ಯಾಲಯದ ಒಬ್ಬ ಕುಲಪತಿಗಳು;

(ಇ) ಸರ್ಕಾರವು ನಾಮನಿರ್ದೇಶಿಸಿದ ಏಳು ಸದಸ್ಯರು, ಅವರ ಪೈಕಿ ಒಬ್ಬರು ಮಹಿಳಾ ಸದಸ್ಯರಾಗಿರತಕ್ಕದ್ದು, ಒಬ್ಬರು ಇತರ ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು, ಒಬ್ಬರು ಅಲ್ಪಸಂಖ್ಯಾತ ಮತಕ್ಕೆ ಸೇರಿದವರನಾಗಿರತಕ್ಕದ್ದು, ಒಬ್ಬರು ಪರಿಶಿಷ್ಟ ಜಾತಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು ಮತ್ತು ಒಬ್ಬರು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಯಾಗಿರತಕ್ಕದ್ದು;

(ಎಫ್) ನಿರ್ದೇಶಕರು, ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ;

(ಜಿ) ನಿರ್ದೇಶಕರು, ಸಂಶೋಧನೆ , ಅನ್ವೇಷಣೆ ಮತ್ತು ಮೌಲ್ಯಮಾಪನ ಕೇಂದ್ರ;

(ಎಚ್) ಕುಲಾಧಿಪತಿಗಳು ನಾಮನಿರ್ದೇಶಿಸಿದ ಗ್ರಾಮೀಣಾಭಿವೃದ್ಧಿಗಾಗಿ ಕೆಲಸ ಮಾಡುತ್ತಿರುವ ಒಂದು ಪ್ರಸಿದ್ಧ ಸರ್ಕಾರೇತರ ಸಂಸ್ಥೆಯ ಒಬ್ಬ ಪ್ರತಿನಿಧಿ;

(ಐ) ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್; ಪ್ರಧಾನ ಕಾರ್ಯದರ್ಶಿ, ಕೃಷಿ ಇಲಾಖೆ; ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ; ಪ್ರಧಾನ ಕಾರ್ಯದರ್ಶಿ, ಆರೋಗ್ಯ ಇಲಾಖೆ ಮತ್ತು ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ – ಇವರುಗಳು ಪದನಿಮಿತ್ತ ಸದಸ್ಯರಾಗಿರತಕ್ಕದ್ದು;

(ಜೆ) ಕುಲಸಚಿವರು – ಪದನಿಮಿತ್ತ ಸದಸ್ಯ–ಕಾರ್ಯದರ್ಶಿಯಾಗಿರತಕ್ಕದ್ದು.

**ವಿವರಣೆ:–** ಮೇಲಿನ ಅನುಕ್ರಮಿತ ಉಪಖಂಡಗಳಲ್ಲಿ ಪರ್ಯಾಲೋಚಿಸಿದ ಹುದ್ದೆಗಳನ್ನು ಹೊಂದಿರುವವರನ್ನು ಹೊರತುಪಡಿಸಿದ ವ್ಯಕ್ತಿಗಳನ್ನು ನಾಮನಿರ್ದೇಶಿಸುವ ಸಂದರ್ಭದಲ್ಲಿ ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ ಮತ್ತು ಸ್ಥಳೀಯ ಪ್ರಜಾತಾಂತ್ರಿಕ ಸಂಸ್ಥೆಗಳನ್ನು ಬಲಪಡಿಸುವಲ್ಲಿ ಕಾನೂನು ಸುಧಾರಣೆಗಳಲ್ಲಿ ಉದ್ಯೋಗ ಸೃಜನೆಯಲ್ಲಿ, ಕೌಶಲ್ಯಗಳನ್ನು ಪ್ರಚುರಪಡಿಸುವಲ್ಲಿ ಮತ್ತು ಗ್ರಾಮೀಣ ಪ್ರದೇಶದಲ್ಲಿನ ಸಾಮಾಜಿಕ ಸೇವೆಗಳಲ್ಲಿ ಮಹತ್ತರ ಕೊಡುಗೆಗಳನ್ನು ನೀಡಿರುವಂತಹ ವ್ಯಕ್ತಿಗಳನ್ನು ಮಾತ್ರ ಪರಿಗಣಿಸತಕ್ಕದ್ದು.

**27. ಕಾರ್ಯನಿರ್ವಾಹಕ ಪರಿಷತ್ತಿನ ಪದಾವಧಿ.–** (1) ಕಾರ್ಯನಿರ್ವಾಹಕ ಪರಿಷತ್ತಿನ ಪದಾವಧಿಯು ಮೂರು ವರ್ಷಗಳಾಗಿರತಕ್ಕದ್ದು.

(2) ಕಾರ್ಯನಿರ್ವಾಹಕ ಪರಿಷತ್ತಿನ ಯಾವೊಬ್ಬ ಸದಸ್ಯನು ಅನುಚಿತ ವರ್ತನೆ, ದುರ್ನಡತೆ ಅಥವಾ ಅನ್ಯಥಾ ವಿಚಾರಣೆಗೆ ಗುರಿಪಡಿಸಿದ ಆಧಾರದ ಮೇಲೆ ಯಾವುದೇ ಸಮಯದಲ್ಲಿ ಕುಲಾಧಿಪತಿಗಳು ಆತನನ್ನು ಅಂಥ ಸದಸ್ಯತ್ವದಿಂದ ತೆಗೆದು ಹಾಕಲು ಬಾಧ್ಯನಾಗಿರತಕ್ಕದ್ದು.

(3) ಮೇಲಿನ ಉಪಖಂಡಗಳಲ್ಲಿ ಉಪಬಂಧಿಸಿರುವಂತೆ ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯತ್ವವು ಪೂರ್ವದಲ್ಲಿ ಅಂತ್ಯಗೊಳ್ಳದಿರುವಾಗ, ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರು ಅವರು ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರಾದ ದಿನಾಂಕದಿಂದ ಮೂರು ವರ್ಷಗಳು ಕೊನೆಗೊಂಡ ಬಳಿಕ ಅವರ ಸದಸ್ಯತ್ವವನ್ನು ತೊರೆದು ಬಿಡತಕ್ಕದ್ದು. ಆದರೆ, ಪುನರ್ ನಾಮನಿರ್ದೇಶನಕ್ಕಾಗಿ ಅಥವಾ ಸಂದರ್ಭಾನುಸಾರವಾಗಿ ಪುನರ್ ನೇಮಕಾತಿಗಾಗಿ ಅವರು ಅರ್ಹರಾಗತಕ್ಕದ್ದಲ್ಲ.

(4) ಪದನಿಮಿತ್ತ ಸದಸ್ಯನನ್ನು ಹೊರತುಪಡಿಸಿ ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯನು, ಕಾರ್ಯನಿರ್ವಾಹಕ ಪರಿಷತ್ತಿನ ಅಧ್ಯಕ್ಷರಿಗೆ, ಪತ್ರವನ್ನು ಬರೆಯುವ ಮೂಲಕ ತನ್ನ ಸ್ಥಾನಕ್ಕೆ ರಾಜೀನಾಮೆ ನೀಡಬಹುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿನ ಅಧ್ಯಕ್ಷರು ಅದನ್ನು ಅಂಗೀಕರಿಸಿದ ಕೂಡಲೇ ಸದರಿ ರಾಜೀನಾಮೆಯು ಜಾರಿಗೆ ಬರತಕ್ಕದ್ದು.

(5) ಕಾರ್ಯನಿರ್ವಾಹಕ ಪರಿಷತ್ತಿನಲ್ಲಿ ಯಾವುದೇ ಸ್ಥಾನ ತೆರವಾದಲ್ಲಿ, ನೇಮಕಾತಿಯ ಮೂಲಕವಾಗಲಿ ಅಥವಾ ಸಂದರ್ಭಾನುಸಾರವಾಗಿ ನಾಮನಿರ್ದೇಶನದ ಮೂಲಕವಾಗಲಿ ಭರ್ತಿ ಮಾಡಲು ಹಕ್ಕುಳ್ಳಂತಹ ಸಂಬಂಧಿತ ಪ್ರಾಧಿಕಾರವು ಒಬ್ಬ ವ್ಯಕ್ತಿಯನ್ನು ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ನೇಮಕವಾಗಿರುವ ಅಥವಾ ನಾಮನಿರ್ದೇಶಿತನಾಗಿರುವ ವ್ಯಕ್ತಿಯು, ಆತನನ್ನು ಯಾರ ಸ್ಥಾನದಲ್ಲಿ ನೇಮಕಗೊಳಿಸಲಾಗಿದೆಯೋ ಅಥವಾ ನಾಮ ನಿರ್ದೇಶಿಸಲಾಗಿದೆಯೋ ಅವನ ಸ್ಥಾನದಲ್ಲಿ ಉಳಿದ ಅವಧಿಯವರೆಗೆ ಮಾತ್ರ, ಖಾಲಿ ಸ್ಥಾನವು ಉಂಟಾಗದಿದ್ದರೇ ಹೇಗೋ ಹಾಗೆ ಪದವನ್ನು ಹೊಂದಿರತಕ್ಕದ್ದು.

**(6)** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಅನ್ಯಥಾ ಉಪಬಂಧಿಸಿದುದನ್ನು ಉಳಿದು, ಬೋಧಕ ಮತ್ತು ಬೋಧಕೇತರ ಎರಡೂ ವರ್ಗದ ಅಥವಾ ಲಿಪಿಕ ವರ್ಗದ ವಿಶ್ವವಿದ್ಯಾಲಯದ ಯಾವೊಬ್ಬ ನೌಕರನು ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಪ್ರಾಧಿಕಾರಗಳ ಸದಸ್ಯನಾಗಿ ನಾಮನಿರ್ದೇಶನಗೊಳ್ಳಲು ಅರ್ಹನಾಗಿರತಕ್ಕದ್ದಲ್ಲ.

**28. ಕಾರ್ಯನಿರ್ವಾಹಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** 5ನೇ ಪ್ರಕರಣಕ್ಕೆ ಬಾಧಕವಾಗದಂತೆ, ಕಾರ್ಯನಿರ್ವಾಹಕ ಪರಿಷತ್ತು, ಈ ಮುಂದಿನ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ಕಾಲಕಾಲಕ್ಕೆ ಈ ಉದ್ದೇಶಕ್ಕಾಗಿ ವಿನಿಯಮಗಳ ಮೂಲಕ ರಚಿತವಾಗಿರುವ ಆಯ್ಕೆ ಸಮಿತಿಯ ಶಿಫಾರಸುಗಳನ್ನು ಆಧರಿಸಿ, ಮತ್ತು ಚಾಲ್ತಿಯಲ್ಲಿರುವ ವಿಶ್ವವಿದ್ಯಾಲಯ ಅನುದಾನಗಳ ಆಯೋಗದ ನಿಯಮಗಳು ಹಾಗೂ ಸರ್ಕಾರದ ಮೀಸಲಾತಿ ನೀತಿಯ ಅನುಸಾರವಾಗಿ ಅವಶ್ಯಕವೆನಿಸಬಹುದಾದಂತೆ, ನಿರ್ದೇಶಕರುಗಳು, ಗ್ರಂಥಪಾಲಕರು, ಪ್ರಾಧ್ಯಾಪಕರು, ಸಹ–ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು ಹಾಗೂ ಇತರ ಬೋಧಕ ಸಿಬಂದಿ ಸದಸ್ಯರನ್ನು ನೇಮಿಸುವುದು:

ಪರಂತು, ಎರಡನೇ ಪರಂತುಕವು ಒಳಗೊಂಡಿರುವ ಸಂದರ್ಭಗಳನ್ನು ಹೊರತುಪಡಿಸಿ, ಶಿಕ್ಷಕರ ಸಂಖ್ಯೆ, ಅರ್ಹತೆ ಮತ್ತು ಉಪಲಬ್ಧಿಗಳಿಗೆ ಸಂಬಂದಿಸಿದಂತೆ ಶೈಕ್ಷಣಿಕ ಪರಿಷತ್ತಿನ ಶಿಫಾರಸುಗಳನ್ನು ಪರಿಗಣಿಸಿದ ತರುವಾಯವಲ್ಲದೆ ಕಾರ್ಯನಿರ್ವಾಹಕ ಪರಿಷತ್ತು ಯಾವುದೇ ಕ್ರಮವನ್ನು ತೆಗೆದುಕೊಳ್ಳತಕ್ಕದ್ದಲ್ಲ:

ಮತ್ತು ಪರಂತು, ಈ ಮುಂದಿನ, ಎಂದರೆ:–

(ಎ) ಯಾವುದೇ ಸಂಖ್ಯಾತಿರಿಕ್ತ (supernumerary) ಹುದ್ದೆಯ; ಅಥವಾ

(ಬಿ) ಪ್ರಾಧ್ಯಾಪಕರ ಹುದ್ದೆಯನ್ನು ಸ್ವೀಕರಿಸುವಂತೆ ಕೋರಿ ಕಾರ್ಯನಿರ್ವಾಹಕ ಪರಿಷತ್ತು ಉನ್ನತ ಶೈಕ್ಷಣಿಕ ಪುರಸ್ಕಾರವನ್ನು ಪಡೆದ ಮತ್ತು ವೃತ್ತಿಪರ ಸಾಧನೆ ಮಾಡಿರುವ ವ್ಯಕ್ತಿಯನ್ನು ಆಹ್ವಾನಿಸಿರುವ,

–ಸಂದರ್ಭದಲ್ಲಿ ನೇಮಕಾತಿಗಳನ್ನು ಮಾಡುವುದಕ್ಕಾಗಿ ಯಾವುದೇ ಆಯ್ಕೆ ಸಮಿತಿಯನ್ನು ರಚಿಸುವುದು ಅವಶ್ಯಕವಾಗಿರತಕ್ಕದ್ದಲ್ಲ.

(2) ಆಡಳಿತ, ಲಿಪಿಕ ಮತ್ತು ಇತರ ಅವಶ್ಯಕ ಹುದ್ದೆಗಳನ್ನು ಸೃಜಿಸುವುದು, ಅಂತಹ ಹುದ್ದೆಗಳ ಸಂಖ್ಯೆ ಮತ್ತು ಉಪಲಬ್ಧಿಗಳನ್ನು ನಿರ್ಧರಿಸುವುದು, ಅಂತಹ ಹುದ್ದೆಗಳ ನೇಮಕಾತಿಗಾಗಿ ಕನಿಷ್ಠ ವಿದ್ಯಾರ್ಹತೆಗಳನ್ನು ನಿರ್ದಿಷ್ಟಪಡಿಸುವುದು ಮತ್ತು ಈ ಸಂಬಂಧದಲ್ಲಿ ರಚಿಸಲಾಗಿರುವ ವಿನಿಯಮಗಳಲ್ಲಿ ನಿಯಮಿಸಹುದಾದಂತಹ ಷರತ್ತುಗಳು ಮತ್ತು ನಿಬಂಧನೆಗಳ ಮೇಲೆ ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಕಮಾಡುವುದು ಚಾಲ್ತಿಯಲ್ಲಿರುವ ಸರ್ಕಾರದ ಮೀಸಲಾತಿ ನೀತಿಯನುಸಾರವಾಗಿ ವೇತನಶ್ರೇಣಿಗಳ ಪರಿಷ್ಕರಣೆಯನ್ನು ಹೊರತುಪಡಿಸಿ ಅಥವಾ ಕಾರ್ಯನಿರ್ವಾಹಕ ಪರಿಷತ್ತು, ಕಾಲಕಾಲಕ್ಕೆ ಗೊತ್ತುವಳಿಯ ಮೂಲಕ, ಸಾಮಾನ್ಯವಾಗಿ ಅಥವಾ ನಿರ್ದಿಷ್ಟವಾಗಿ ನಿರ್ದೇಶಿಸಬಹುದಾದ ಅಂಥ ಪ್ರಾಧಿಕಾರಕ್ಕೆ ಅಥವಾ ಪ್ರಾಧಿಕಾರಗಳಿಗೆ ಅಥವಾ ಅಧಿಕಾರಿಗೆ ಅಥವಾ ಅಧಿಕಾರಿಗಳಿಗೆ ನೇಮಕಾತಿಯ ಅಧಿಕಾರಗಳನ್ನು ಪ್ರತ್ಯಾಯೋಜಿಸಬಹುದು.

(3) ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿಗೆ ಸಾಂದರ್ಭಿಕ ರಜೆ ಹೊರತುಪಡಿಸಿ ಗೈರು ಹಾಜರಿಯ ರಜೆಯನ್ನು ಮಂಜೂರು ಮಾಡುವುದು ಮತ್ತು ವಿನಿಯಮಗಳಿಗೆ ಅನುಸಾರವಾಗಿ ಆತನ ಅವಶ್ಯಕ ಗೈರುಹಾಜರಿಯಲ್ಲಿ ಅಂಥ ಸದರಿ ಅಧಿಕಾರಿಯ ಪ್ರಕಾರ್ಯಗಳನ್ನು ನಿರ್ವಹಿಸಲು ಅವಶ್ಯಕ ಏರ್ಪಾಡುಗಳನ್ನು ಮಾಡುವುದು.

(4) ವಿಶ್ವವಿದ್ಯಾಲಯದ ಹಣಕಾಸು, ಲೆಕ್ಕ–ಪತ್ರ, ಹೂಡಿಕೆ, ಸ್ವತ್ತು, ವ್ಯವಹಾರ ಮತ್ತು ಇತರ ಎಲ್ಲಾ ಆಡಳಿತಾತ್ಮಕ ವ್ಯವಹಾರಣೆಗಳನ್ನು ನಿರ್ವಹಿಸುವುದು ಮತ್ತು ನಿಯಂತ್ರಿಸುವುದು ಹಾಗೂ ಅಂಥ ಉದ್ದೇಶಗಳಿಗಾಗಿ, ಅದು ಸೂಕ್ತವೆಂದು ನೇಮಿಸಬಹುದಾದಂಥ ಏಜೆಂಟರನ್ನು ನೇಮಕ ಮಾಡುವುದು.

(5) ಅನ್ವಯಿಸಿದ ಆದಾಯವೂ ಸೇರಿದಂತೆ, ವಿಶ್ವವಿದ್ಯಾಲಯಕ್ಕೆ ಸೇರಿರುವ ಯಾವುದೇ ಹಣವನ್ನು ಕಾಲಕಾಲಕ್ಕೆ ತನಗೆ ಸೂಕ್ತವೆನಿಸಬಹುದಾದಂತಹ ಅಥವಾ ಯಾವುದೇ ರಾಷ್ಟ್ರೀಯ ಬ್ಯಾಂಕುಗಳಲ್ಲಿ, ಸರ್ಕಾರಿ ಭದ್ರತಾ ಪತ್ರಗಳಲ್ಲಿ ಅಥವಾ ಭಾರತದಲ್ಲಿನ ಸ್ಥಿರಾಸ್ತಿ ಖರೀದಿಯಲ್ಲಿ, ಕಾಲಕಾಲಕ್ಕೆ ಅಂತಹ ಹೂಡಿಕೆಗಳನ್ನು ಮಾರ್ಪಡಿಸುವ ಅಧಿಕಾರದೊಂದಿಗೆ ಹೂಡಿಕೆ ಮಾಡುವುದು.

(6) ವಿಶ್ವವಿದ್ಯಾಲಯದ ಪರವಾಗಿ ಯಾವುದೇ ಸ್ಥಿರಾಸ್ತಿ ಅಥವಾ ಚರಾಸ್ತಿಯನ್ನು ವರ್ಗಾಯಿಸುವುದು ಅಥವಾ ಅಂಥ ವರ್ಗಾವಣೆಯನ್ನು ಸ್ವೀಕರಿಸುವುದು:

ಪರಂತು, ಯಾವುದೇ ಸ್ಥಿರ ಸ್ವತ್ತನ್ನು ಸರ್ಕಾರದ ಪೂರ್ವಾನುಮೋದನೆಯಿಲ್ಲದೆ ವರ್ಗಾಯಿಸತಕ್ಕದ್ದಲ್ಲ.

(7) ವಿಶ್ವವಿದ್ಯಾಲಯದ ಪರವಾಗಿ ಕರಾರುಗಳನ್ನು ಮಾಡಿಕೊಳ್ಳುವುದು, ಮಾರ್ಪಡಿಸುವುದು, ನೆರವೇರಿಸುವುದು ಮತ್ತು ರದ್ದುಗೊಳಿಸುವುದು ಹಾಗೂ ಆ ಉದ್ದೇಶಕ್ಕಾಗಿ ತಾನು ಸೂಕ್ತವೆಂದು ಭಾವಿಸಿದ ಅಂಥ ಅಧಿಕಾರಿಗಳನ್ನು ನೇಮಕ ಮಾಡುವುದು.

(8) ವಿಶ್ವವಿದ್ಯಾಲಯದ ಕಾರ್ಯಗಳನ್ನು ನಡೆಸಿಕೊಂಡು ಹೋಗಲು ಅಗತ್ಯವಿರುವ ಕಟ್ಟಡ, ಆವರಣಗಳು, ಪೀಠೋಪಕರಣ ಮತ್ತು ಸಲಕರಣೆಗಳು ಹಾಗೂ ಇನ್ನಿತರ ಸಾಧನಗಳನ್ನು ಒದಗಿಸುವುದು.

(9) ನ್ಯಾಯಾಲಯದ ಕ್ರಮದ ಹೊರತಾಗಿ, ಯಾವುದೇ ಕಾರಣಕ್ಕಾಗಿ ಬಾಧಿತರಾಗಿರುವುದಾಗಿ ಭಾವಿಸುವ ವಿಶ್ವವಿದ್ಯಾಲಯದ ಅಧಿಕಾರಿಗಳ ಯಾವುದೇ ಬೋಧಕರ, ವಿದ್ಯಾರ್ಥಿಗಳ ಮತ್ತು ವಿಶ್ವವಿದ್ಯಾಲಯದ ನೌಕರರ ಯಾವುವೇ ಕುಂದುಕೊರತೆಗಳನ್ನು ತಾನು ಸೂಕ್ತವೆಂದು ಭಾವಿಸಿದರೆ ಪರಿಹರಿಸುವುದು, ಪುರಸ್ಕರಿಸುವುದು, ಅವುಗಳ ಬಗ್ಗೆ ನ್ಯಾಯನಿರ್ಣಯಿಸುವುದು.

(10) ಶೈಕ್ಷಣಿಕ ಪರಿಷತ್ತಿನೊಂದಿಗೆ ಸಮಾಲೋಚಿಸಿದ ನಂತರ ಪರೀಕ್ಷಕರನ್ನು ಮತ್ತು ಮಾಡ್‌ರೇಟರ್‌ಗಳನ್ನು ನೇಮಕಮಾಡುವುದು ಹಾಗೂ ಅಗತ್ಯವೆನಿಸಿದರೆ ಅವರನ್ನು ತೆಗೆದುಹಾಕುವುದು ಮತ್ತು ಅವರ ಶುಲ್ಕ, ಸಂಭಾವನೆ ಮತ್ತು ಪ್ರಯಾಣ ಹಾಗೂ ಇತರ ಭತ್ಯಗಳನ್ನು ನಿಗದಿಪಡಿಸುವುದು.

(11) ವಿಶ್ವವಿದ್ಯಾಲಯಕ್ಕಾಗಿ ಸಾಮಾನ್ಯ ಮೊಹರನ್ನು ಆಯ್ಕೆ ಮಾಡುವುದು ಮತ್ತು ಮೊಹರಿನ ಅಭಿರಕ್ಷೆಗಾಗಿ ಉಪಬಂಧವನ್ನು ಕಲ್ಪಿಸುವುದು.

(12) ವಿಶ್ವವಿದ್ಯಾಲಯದ ಸ್ವತ್ತುಗಳು ಮತ್ತು ನಿಧಿಗಳ ಸೂಕ್ತ ಲೆಕ್ಕಪತ್ರಗಳ ನಿರ್ವಹಿಸುವಂತೆ ಮಾಡುವುದು;

(13) ಇವುಗಳಿಗಾಗಿ,–

(i) ಬೋಧನೆ ಮತ್ತು ಸಂಶೋಧನೆ;

(ii) ಪರೀಕ್ಷೆಗಳಿಗೆ ಪ್ರವೇಶಾತಿ ಮತ್ತು ಘಟಿಕೋತ್ಸವ;

(iii)ವಿಶ್ವವಿದ್ಯಾಲಯವು ಕೈಗೊಳ್ಳಬಹುದಾದ ಅಂಥ ಇತರ ಯಾವುದೇ ಸೇವೆಗಳು; ಮತ್ತು

(iv)ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಇತರ ಉದ್ದೇಶಗಳು,

–ಇವುಗಳಿಗೆ ಶುಲ್ಕವನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು.

(14) ವಿಶ್ವವಿದ್ಯಾಲಯದ ಆರ್ಥಿಕ ಅಂದಾಜನ್ನು ತಯಾರಿಸುವುದು ಮತ್ತು ಅದನ್ನು ಶೈಕ್ಷಣಿಕೆ ಪರಿಷತ್ತಿಗೆ ಸಲ್ಲಿಸುವುದು.

(15) ವಿಶ್ವವಿದ್ಯಾಲಯದ ಪರವಾಗಿ ಅಥವಾ ಅದಕ್ಕೆ ವಿರುದ್ಧವಾಗಿ ಇರುವ ದಾವೆಯನ್ನು ನಿರ್ವಹಿಸುವುದಕ್ಕೆ ವ್ಯವಸ್ಥೆ ಮಾಡುವುದು.

(16) ಶೈಕ್ಷಣಿಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಫೆಲೋಶಿಪ್‌ಗಳು, ಸಂಚಾರಿ ಫೆಲೋಶಿಪ್‌ಗಳು, ಸ್ಕಾಲರ್‌ಶಿಪ್‌ಗಳೂ, ಸ್ಟೂಡೆಂಡ್‌ಶಿಪ್‌ಗಳು, ಪದಕಗಳು ಮತ್ತು ಬಹುಮಾನಗಳನ್ನು ಪ್ರಾರಂಭಿಸುವುದು.

(17) ಶೈಕ್ಷಣಿಕ ಪರಿಷತ್ತಿನ ಶಿಫಾರಸ್ಸಿನ ಮೇರೆಗೆ ಗೌರವ ಪದವಿಗಳು, ಬಿರುದುಗಳು ಅಥವಾ ಇತರ ಶೈಕ್ಷಣಿಕ ಪುರಸ್ಕಾರಗಳನ್ನು ಪ್ರದಾನ ಮಾಡುವುದು.

(18) ವಿನಿಯಮಗಳು, ಪರ್ಯಾದೇಶಗಳನ್ನು ರಚಿಸುವುದು, ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು.

(19) ಶೈಕ್ಷಣಿಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಗೌರವ ಪ್ರಾಧ್ಯಾಪಕ ಬಿರುದನ್ನು ಪ್ರದಾನ ಮಾಡುವುದು.

(20) ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಸೃಜಿಸುವುದಕ್ಕಾಗಿ ವಿನಿಯಮಗಳನ್ನು ರಚಿಸುವುದು.

(21) ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಪ್ರದತ್ತಗೊಳಿಸಬಹುದಾದಂಥ ಅಥವಾ ವಿಧಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸುವುದು.

**29. ಕಾರ್ಯನಿರ್ವಾಹಕ ಪರಿಷತ್ತಿನ ಸಭೆ.–** (1) ಕಾರ್ಯನಿರ್ವಾಹಕ ಪರಿಷತ್ತು ಕನಿಷ್ಠ ಮೂರು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು. ಅಂತಹ ಸಭೆಯ ತಿಳಿವಳಿಕೆ ಪತ್ರವನ್ನು ಏಳು ದಿನಗಳಿಗೆ ಕಡಿಮೆಯಿಲ್ಲದಂತೆ ನೀಡತಕ್ಕದ್ದು.

(2) ಕುಲಸಚಿವರು ಅಧ್ಯಕ್ಷರ ಪೂರ್ವಾನುಮೋದನೆಯೊಂದಿಗೆ ಸಭೆಯನ್ನು ಸೇರಿಸತಕ್ಕದ್ದು.

(3) ಕಾರ್ಯನಿರ್ವಾಹಕ ಪರಿಷತ್ತಿನ ಏಳು ಸದಸ್ಯರು ಅದರ ಯಾವುದೇ ಸಭೆಯ ಕೋರಂ ಆಗಿ ರೂಪುಗೊಳ್ಳತಕ್ಕದ್ದು.

(4) ಸದಸ್ಯರಲ್ಲಿ ಭಿನ್ನಾಭಿಪ್ರಾಯ ಮೂಡಿದ ಸಂದರ್ಭದಲ್ಲಿ ಬಹುಮತದ ಅಭಿಪ್ರಾಯವು ಪ್ರಾಧಾನ್ಯವುಳ್ಳದ್ದಾಗಿರತಕ್ಕದ್ದು.

(5) ಕಾರ್ಯನಿರ್ವಾಹಕ ಪರಿಷತ್ತಿನ ಪ್ರತಿಯೊಬ್ಬ ಸದಸ್ಯನು ಒಂದು ಮತವನ್ನು ಹೊಂದಿರತಕ್ಕದ್ದು ಮತ್ತು ಕಾರ್ಯನಿರ್ವಾಹಕ ಪರಿಷತ್ತು ನಿರ್ಧರಿಸಬೇಕಾದ ಯಾವುದೇ ಪ್ರಶ್ನೆಯ ಮೇಲೆ ಮತಗಳು ಸಮಾನವಾಗಿದ್ದಲ್ಲಿ, ಕಾರ್ಯನಿರ್ವಾಹಕ ಪರಿಷತ್ತಿನ ಅಧ್ಯಕ್ಷ ಆಥವಾ ಸಂದರ್ಭಾನುಸಾರವಾಗಿ ಆ ಸಭೆಯ ಅಧ್ಯಕ್ಷತೆ ವಹಿಸಿರುವ ಸದಸ್ಯನು ಹೆಚ್ಚುವರಿಯಾಗಿ, ನಿರ್ಣಾಯಕ ಮತವನ್ನು ಚಲಾಯಿಸತಕ್ಕದ್ದು.

(6) ಕಾರ್ಯನಿರ್ವಾಹಕ ಪರಿಷತ್ತಿನ ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ಕುಲಪತಿಯು ವಹಿಸತಕ್ಕದ್ದು ಮತ್ತು ಆತನ ಗೈರುಹಾಜರಿಯಲ್ಲಿ ಹಾಜರಿರುವ ಸದಸ್ಯರು ಆಯ್ಕೆ ಮಾಡುವ ಸದಸ್ಯನು ಆ ಸಂದರ್ಭದಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(7) ಕಾರ್ಯನಿರ್ವಾಹಕ ಪರಿಷತ್ತಿನಿಂದ ತುರ್ತು ಕ್ರಮವು ಅವಶ್ಯಕವಾಗಿದ್ದರೆ, ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರಿಗೆ ಕಾಗದ–ಪತ್ರಗಳನ್ನು ಪರಿಚಲನೆ ಮಾಡುವ ಮೂಲಕ ನಡೆಸಬಹುದಾದ ವ್ಯವಹರಣೆಗಳನ್ನು ನಿರ್ವಹಿಸಲು ಕುಲಪತಿಗಳು ಅನುಮತಿ ನೀಡಬಹುದು. ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರು ಬಹುಮತದ ಮೂಲಕ ಸಮ್ಮತಿಸಿದ ಹೊರತು, ಕೈಗೊಳ್ಳಬೇಕೆಂದು ಪ್ರಸ್ತಾಪಿಸಿರುವ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ. ಹಾಗೆ ತೆಗೆದುಕೊಂಡ ಕ್ರಮದ ಬಗ್ಗೆ ಕೂಡಲೇ ಕಾರ್ಯನಿರ್ವಾಹಕ ಪರಿಷತ್ತಿನ ಎಲ್ಲಾ ಸದಸ್ಯರಿಗೆ ಮಾಹಿತಿಯನ್ನು ನೀಡತಕ್ಕದ್ದು. ಕಾರ್ಯನಿರ್ವಾಹಕ ಪರಿಷತ್ತಿನ ಮುಂದಿನ ಸಭೆಯಲ್ಲಿ ಎಲ್ಲಾ ಕಾಗದ–ಪತ್ರಗಳನ್ನು ಸ್ಥಿರೀಕರಣಕ್ಕಾಗಿ ಮಂಡಿಸತಕ್ಕದ್ದು.

**30. ಕಾರ್ಯನಿರ್ವಾಹಕ ಪರಿಷತ್ತಿನಿಂದ ಸ್ಥಾಯಿ ಸಮಿತಿಯ ರಚನೆ ಮತ್ತು ಹಂಗಾಮಿ (ad-hoc) ಸಮಿತಿಗಳ ನೇಮಕಾತಿ.–** (1) ಈ ಅಧಿನಿಯಮದ ಮತ್ತು ಈ ಬಗ್ಗೆ ರಚಿಸಿರುವ ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ಕಾರ್ಯನಿರ್ವಾಹಕ ಪರಿಷತ್ತು, ಗೊತ್ತುವಳಿಯ ಮೂಲಕ, ವಿಶ್ವವಿದ್ಯಾಲಯದ ಯಾವುದೇ ಅಧಿಕಾರವನ್ನು ಚಲಾಯಿಸುವುದಕ್ಕಾಗಿ ಅಥವಾ ಯಾವುದೇ ಪ್ರಕಾರ್ಯವನ್ನು ನಿರ್ವಹಿಸುವುದಕ್ಕಾಗಿ ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದ ಯಾವುದೇ ವಿಚಾರದ ಬಗ್ಗೆ ವಿಚಾರಣೆ ನಡೆಸಲು, ವರದಿ ಮಾಡಲು ಅಥವಾ ಸಲಹೆ ನೀಡಲು, ಸೂಕ್ತವೆಂದು ಭಾವಿಸಬಹುದಾದ ಅಂಥ ಉದ್ದೇಶಗಳಿಗಾಗಿ ಮತ್ತು ಅಂಥ ಅಧಿಕಾರಗಳೊಂದಿಗೆ ಸ್ಥಾಯಿ ಸಮಿತಿಗಳನ್ನು ರಚಿಸಬಹುದು ಅಥವಾ ಹಂಗಾಮಿ ಸಮಿತಿಗಳನ್ನು ನೇಮಕ ಮಾಡಬಹುದು.

(2) ಕಾರ್ಯನಿರ್ವಾಹಕ ಪರಿಷತ್ತು ತನಗೆ ಸೂಕ್ತವೆನಿಸುವಂತಹ ವ್ಯಕ್ತಿಗಳನ್ನು ಸ್ಥಾಯಿ ಸಮಿತಿಗೆ ಅಥವಾ ಹಂಗಾಮಿ ಸಮಿತಿಗೆ ಕೋ–ಆಪ್ಟ್ ಮಾಡಿಕೊಳ್ಳಬಹುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿನ ಸಭೆಗಳಲ್ಲಿ ಅವರಿಗೆ ಭಾಗಿಯಾಗಲು ಅನುಮತಿಸಬಹುದು.

**31. ಕಾರ್ಯನಿರ್ವಾಹಕ ಪರಿಷತ್ತಿನಿಂದ ಅಧಿಕಾರಗಳ ಪ್ರತ್ಯಾಯೋಜನೆ.–.** ಕಾರ್ಯನಿರ್ವಾಹಕ ಪರಿಷತ್ತು, ಗೊತ್ತುವಳಿಯ ಮೂಲಕ, ಪ್ರತ್ಯಾಯೋಜಿಸಿದ ಅಧಿಕಾರಗಳನ್ನು ಚಲಾಯಿಸಿ ಕುಲಪತಿಗಳು ಅಥವಾ ಆ ಸಮಿತಿಯು ಕೈಗೊಂಡಿರುವ ಕ್ರಮವನ್ನು ಕಾರ್ಯನಿರ್ವಾಹಕ ಪರಿಷತ್ತಿನ ಮುಂದಿನ ಸಭೆಯಲ್ಲಿ ವರದಿ ಮಾಡಬೇಕೆಂಬ ಷರತ್ತಿಗೆ ಒಳಪಟ್ಟು, ಕುಲಪತಿಗಳಿಗೆ ಅಥವಾ ಸಮಿತಿಗೆ ತಾನು ಸೂಕ್ತವೆಂದು ಭಾವಿಸುವಂತಹ ಅಧಿಕಾರಗಳನ್ನು ಪ್ರತ್ಯಾಯೋಜಿಸಬಹುದು.

**32. ಶೈಕ್ಷಣಿಕ ಪರಿಷತ್ತು.–** ಶೈಕ್ಷಣಿಕ ಪರಿಷತ್ತು ವಿಶ್ವವಿದ್ಯಾಲಯದ ಶೈಕ್ಷಣಿಕ ಸಂಸ್ಥೆಯಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳಿಗೊಳಪಟ್ಟು ವಿಶ್ವವಿದ್ಯಾಲಯದ ಬೋಧನೆ, ಶಿಕ್ಷಣ, ಸಂಶೋಧನೆ ಮತ್ತು ಪರೀಕ್ಷೆಯ ಗುಣಮಟ್ಟವನ್ನು ಕಾಪಾಡುವ ಮತ್ತು ಸಾಮಾನ್ಯ ನಿಯಂತ್ರಣ ಮತ್ತು ಹೊಣೆಗಾರಿಕೆಯನ್ನು

ಹೊಂದಿರತಕ್ಕದ್ದು ಮತ್ತು ಈ ಅಧಿನಿಯಮ ಅಥವಾ ವಿನಿಯಮಗಳು ಪ್ರದತ್ತ ಮಾಡಬಹುದಾದಂತಹ ಅಥವಾ ವಿಧಿಸಬಹುದಾದಂತಹ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಎಲ್ಲಾ ಶೈಕ್ಷಣಿಕ ವಿಚಾರಗಳ ಕುರಿತಾಗಿ ಕಾರ್ಯನಿರ್ವಾಹಕ ಪರಿಷತ್ತಿಗೆ ಸಲಹೆ ನೀಡುವ ಹಕ್ಕನ್ನು ಹೊಂದಿರತಕ್ಕದ್ದು.

**33. ಶೈಕ್ಷಣಿಕ ಪರಿಷತ್ತಿನ ಸದಸ್ಯತ್ವ.–** (1) ಶೈಕ್ಷಣಿಕ ಪರಿಷತ್ತು ಈ ಮುಂದಿನ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಕುಲಪತಿಗಳು -- ಅದರ ಅಧ್ಯಕ್ಷರಾಗಿರುವರು;

(ಬಿ) ಸರ್ಕಾರವು ನಾಮನಿರ್ದೇಶನ ಮಾಡಿದ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಅಥವ ಕಾನೂನು ಸುಧಾರಣೆಗಳ ಕ್ಷೇತ್ರದಲ್ಲಿ ಪ್ರಮುಖವಾದ ಕೊಡುಗೆಯನ್ನು ನೀಡಿರುವ ಇಬ್ಬರು ಸದಸ್ಯರು;

(ಸಿ) ಕುಲಪತಿಗಳು ನಾಮನಿರ್ದೇಶನ ಮಾಡಿದ ವಿಶ್ವವಿದ್ಯಾಲಯದ ಸೇವೆಯಲ್ಲಿ ಇಲ್ಲದಿರುವಂತಹ ಪ್ರಸಿದ್ಧ ಶಿಕ್ಷಣ ತಜ್ಞರು ಅಥವಾ ಸಾಹಿತಿಗಳು (ಅಕ್ಷರ ಸ್ನೇಹಿಗಳು) ಅಥವಾ ಖ್ಯಾತ ಸಾರ್ವಜನಿಕ ವ್ಯಕ್ತಿ ಅಥವಾ ಕೈಗಾರಿಕೋದ್ಯಮಿಗಳ ಪೈಕಿ ಮೂರು ವ್ಯಕ್ತಿಗಳು;

(ಡಿ) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆಯ ನಿರ್ದೇಶಕರು;

(ಇ) ನಿರ್ದೇಶಕರು, ಸಂಶೋಧನಾ, ಅನ್ವೇಷಣೆ ಮತ್ತು ಮೌಲ್ಯಮಾಪನ ಕೇಂದ್ರ;

(ಎಫ್) ಶಾಲೆಗಳ ಎಲ್ಲಾ ಮುಖ್ಯಸ್ಥರು;

(ಜಿ) ಪ್ರಾದೇಶಿಕ ಕೇಂದ್ರಗಳ ಎಲ್ಲಾ ಮುಖ್ಯಸ್ಥರು;

(ಎಚ್) ನಿರ್ದೇಶಕರು, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು;

(ಐ) ಕುಲಪತಿಗಳು ಜೇಷ್ಠತೆ ಮತ್ತು ಸುತ್ತು ಸರದಿಯ ಮೂಲಕ, ನಾಮನಿರ್ದೇಶನ ಮಾಡಿದ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಸಹ–ಪ್ರಾಧ್ಯಾಪಕರು ಮತ್ತು ಸಹಾಯಕ ಪ್ರಾಧ್ಯಾಪಕರನ್ನು ಪ್ರತಿನಿಧಿಸುವ ಬೋಧಕ ಸಿಬ್ಬಂದಿಗಳ ಮೂರು ಸದಸ್ಯರು;

(ಜೆ) ಕುಲಸಚಿವರು ಪದನಿಮಿತ್ತ ಸದಸ್ಯ–ಕಾರ್ಯದರ್ಶಿಯಾಗಿರತಕ್ಕದ್ದು.

(2) ಸದಸ್ಯರ ಪದಾವಧಿಯು, ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ ಮೂರು ವರ್ಷಗಳಾಗಿರತಕ್ಕದ್ದು.

(3) ಶೈಕ್ಷಣಿಕ ಪರಿಷತ್ತಿನ ಸದಸ್ಯನು ರಾಜೀನಾಮೆ ನೀಡಿದರೆ ಅಥವಾ ಅಸ್ವಸ್ಥಚಿತ್ತನಾದರೆ ಅಥವಾ ದಿವಾಳಿಯಾದರೆ ಅಥವಾ ನೈತಿಕ ಅಧಃಪತನವನ್ನು ಒಳಗೊಂಡಿರುವ ಕ್ರಿಮಿನಲ್ ಅಪರಾಧಕ್ಕೆ ಶಿಕ್ಷಿತನಾಗಿದ್ದರೆ ಅಥವಾ ಕುಲಪತಿಯನ್ನು ಹೊರತುಪಡಿಸಿ ಯಾವೊಬ್ಬ ಸದಸ್ಯನು ವಿಶ್ವವಿದ್ಯಾಲಯದಲ್ಲಿ ಪೂರ್ಣಕಾಲಿಕ ನೇಮಕಾತಿಯನ್ನು ಸ್ವೀಕರಿಸಿದ್ದರೆ ಆತನ ಸದಸ್ಯತ್ವವು ಕೊನೆಗೊಳ್ಳತಕ್ಕದ್ದು.

(4) ಮೇಲಿನ ಉಪಖಂಡಗಳಲ್ಲಿ ಉಪಬಂಧಿಸಿರುವಂತೆ ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯತ್ವವು ಪೂರ್ವದಲ್ಲಿ ಅಂತ್ಯಗೊಳ್ಳದಿರುವಾಗ, ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರು ಅವರು ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರಾದ ದಿನಾಂಕದಿಂದ ಮೂರು ವರ್ಷಗಳು ಕೊನೆಗೊಂಡ ಬಳಿಕ ಅವರ ಸದಸ್ಯತ್ವವನ್ನು ತೊರೆದು ಬಿಡತಕ್ಕದ್ದು. ಆದರೆ, ಪುನರ್ ನಾಮನಿರ್ದೇಶನಕ್ಕಾಗಿ ಅಥವಾ ಸಂದರ್ಭಾನುಸಾರವಾಗಿ ಪುನರ್ ನೇಮಕಾತಿಗಾಗಿ ಅವರು ಅರ್ಹರಾಗತಕ್ಕದ್ದಲ್ಲ.

(5) ಪದನಿಮಿತ್ತ ಸದಸ್ಯನನ್ನು ಹೊರತುಪಡಿಸಿ ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯನು, ಕಾರ್ಯನಿರ್ವಾಹಕ ಪರಿಷತ್ತಿನ ಅಧ್ಯಕ್ಷರಿಗೆ, ಪತ್ರವನ್ನು ಬರೆಯುವ ಮೂಲಕ ತನ್ನ ಸ್ಥಾನಕ್ಕೆ ರಾಜೀನಾಮೆ ನೀಡಬಹುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿನ ಅಧ್ಯಕ್ಷರು ಅದನ್ನು ಅಂಗೀಕರಿಸಿದ ಕೂಡಲೇ ಸದರಿ ರಾಜೀನಾಮೆಯು ಜಾರಿಗೆ ಬರತಕ್ಕದ್ದು.

(6) ಕಾರ್ಯನಿರ್ವಾಹಕ ಪರಿಷತ್ತಿನಲ್ಲಿ ಯಾವುದೇ ಸ್ಥಾನ ತೆರವಾದಲ್ಲಿ, ನೇಮಕಾತಿಯ ಮೂಲಕವಾಗಲಿ ಅಥವಾ ಸಂದರ್ಭಾನುಸಾರವಾಗಿ ನಾಮನಿರ್ದೇಶನದ ಮೂಲಕವಾಗಲಿ ಭರ್ತಿ ಮಾಡಲು ಹಕ್ಕುಳ್ಳಂತಹ ಸಂಬಂಧಿತ ಪ್ರಾಧಿಕಾರವು ಒಬ್ಬ ವ್ಯಕ್ತಿಯನ್ನು ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ನೇಮಕವಾಗಿರುವ ಅಥವಾ ನಾಮನಿರ್ದೇಶಿತನಾಗಿರುವ ವ್ಯಕ್ತಿಯು, ಆತನನ್ನು ಯಾರ ಸ್ಥಾನದಲ್ಲಿ ನೇಮಕಗೊಳಿಸಲಾಗಿದೆಯೋ ಅಥವಾ ನಾಮ ನಿರ್ದೇಶಿಸಲಾಗಿದೆಯೋ ಅವನ ಸ್ಥಾನದಲ್ಲಿ ಉಳಿದ ಅವಧಿಯವರೆಗೆ ಮಾತ್ರ, ಖಾಲಿ ಸ್ಥಾನವು ಉಂಟಾಗದಿದ್ದರೇ ಹೇಗೋ ಹಾಗೆ ಪದವನ್ನು ಹೊಂದಿರತಕ್ಕದ್ದು.

(7) ಶೈಕ್ಷಣಿಕ ಪರಿಷತ್ತಿನ ಯಾವುದೇ ನಾಮನಿರ್ದೇಶಿತ ಸದಸ್ಯನನ್ನು ದುರ್ವರ್ತನೆ, ದುರ್ನಡತೆ ಅಥವಾ ಇನ್ನಿತರ ಆಧಾರದ ಮೇಲೆ ವಿಚಾರಣೆ ನಡೆಸಿದ ತರುವಾಯ ಕುಲಪತಿಗಳು ಸದಸ್ಯತ್ವದಿಂದ ಯಾವುದೇ ವೇಳೆಯಲ್ಲಿ ತೆಗೆದುಹಾಕಬಹುದು.

(8) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಅನ್ಯಥಾ ಉಪಬಂಧಿಸಿದುದನ್ನು ಉಳಿದು, ಬೋಧಕ ಮತ್ತು ಬೋಧಕೇತರ ಎರಡೂ ವರ್ಗದ ಅಥವಾ ಲಿಪಿಕ ವರ್ಗದ ವಿಶ್ವವಿದ್ಯಾಲಯದ ಯಾವೊಬ್ಬ ನೌಕರನು ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಪ್ರಾಧಿಕಾರಗಳ ಸದಸ್ಯನಾಗಿ ನಾಮನಿರ್ದೇಶನಗೊಳ್ಳಲು ಅರ್ಹನಾಗಿರತಕ್ಕದ್ದಲ್ಲ.

**34. ಶೈಕ್ಷಣಿಕ ಪರಿಷತ್ತಿನ ಅಧಿಕಾರಗಳು ಮತ್ತು ಕರ್ತವ್ಯಗಳು.–** ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳಿಗೊಳಪಟ್ಟು ಶೈಕ್ಷಣಿಕ ಪರಿಷತ್ತು, ತನ್ನಲ್ಲಿ ನಿಹಿತವಾಗಿರುವ ಅಧಿಕಾರಗಳಿಗೆ ಹೆಚ್ಚುವರಿಯಾಗಿ, ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳೊಂದಿಗೆ ಅನುರೂಪವಾಗಿರುವ ಅಗತ್ಯ ವಿನಿಯಮಗಳು ಮತ್ತು ಪಠ್ಯಕ್ರಮಗಳ ಜೊತೆಗೆ ಪದವಿ, ಡಿಪ್ಲೊಮಾ, ಸರ್ಟಿಫಿಕೇಟ್ ಕೋರ್ಸ್‌ಗಳು ಮತ್ತು ಇತರ ಕೋರ್ಸುಗಳನ್ನು ಪ್ರಾರಂಭಿಸಲು ಶಿಫಾರಸ್ಸು ಮಾಡುವುದು;

(2) ಕಾರ್ಯನಿರ್ವಾಹಕ ಪರಿಷತ್ತು ಪ್ರಸ್ತಾಪಿಸಿರುವ ಅಥವಾ ಪ್ರತ್ಯಾಯೋಜಿಸಿರುವ ಯಾವುದೇ ವಿಚಾರಗಳ ಬಗ್ಗೆ ವರದಿ ಸಲ್ಲಿಸುವುದು;

(3) ವಿಶ್ವವಿದ್ಯಾಲಯದಲ್ಲಿನ ಬೋಧಕ ಹುದ್ದೆಗಳ ಸೃಜನೆ, ರದ್ಧತಿ ಅಥವಾ ವರ್ಗೀಕರಣ ಮತ್ತು ಅದಕ್ಕೆ ಸಂಬಂಧಪಟ್ಟ ಉಪಲಬ್ಧಗಳು ಮತ್ತು ಕರ್ತವ್ಯಗಳ ಕುರಿತಾಗಿ ಕಾರ್ಯನಿರ್ವಾಹಕ ಪರಿಷತ್ತಿಗೆ ಶಿಫಾರಸು ಮಾಡುವುದು;

(4) ನಿರ್ದೇಶನಾಲಯಗಳ ಅಥವಾ ಶಾಲೆಗಳ ಸಂಘಟನೆಗಾಗಿ ಯೋಜನೆಗಳನ್ನು ರೂಪಿಸುವುದು ಮತ್ತು ಮಾರ್ಪಡಿಸುವುದು ಅಥವಾ ಪರಿಷ್ಕರಿಸುವುದು ಹಾಗೂ ಅವುಗಳಿಗೆ ಸಂಬಂಧಪಟ್ಟ ವಿಷಯಗಳನ್ನು ವಹಿಸುವುದು ಮತ್ತು ಅವುಗಳಲ್ಲಿ ಯಾವೊಂದರ ರದ್ಧತಿ ಅಥವಾ ಉಪವಿಭಜನೆ ಅಥವಾ ವಿಲೀನತೆಯ ಸಮಯೋಚಿತತೆಯ ಕುರಿತಾಗಿ ಕಾರ್ಯನಿರ್ವಾಹಕ ಪರಿಷತ್ತಿಗೆ ವರದಿ ಸಲ್ಲಿಸುವುದು;

(5) ವಿಶ್ವವಿದ್ಯಾಲಯದಲ್ಲಿ ದಾಖಲಾಗಿರುವವರನ್ನು ಹೊರತುಪಡಿಸಿ ಇತರ ವ್ಯಕ್ತಿಗಳಿಗೆ ಬೋಧನೆ ಮತ್ತು ಪರೀಕ್ಷೆಗಾಗಿ ವಿನಿಯಮಗಳನ್ನು ರಚಿಸುವುದು;

(6) ವಿಶ್ವವಿದ್ಯಾಲಯದೊಳಗೆ ಸಂಶೋಧನೆಯನ್ನು ಉತ್ತೇಜಿಸುವುದು ಮತ್ತು ಕಾಲಕಾಲಕ್ಕೆ, ಅಂತಹ ಸಂಶೋಧನೆಯ ಕುರಿತಾದ ವರದಿಗಳನ್ನು ಅಗತ್ಯಪಡಿಸುವುದು;

(7) ಬೋಧಕರು ಸಲ್ಲಿಸಿರುವ ಶೈಕ್ಷಣಿಕ, ಸಂಶೋಧನೆ ಮತ್ತು ವಿಸ್ತರಣಾ ಪ್ರಸ್ತಾವನೆಗಳನ್ನು ಪರಿಗಣಿಸುವುದು ಮತ್ತು ಅನುಮೋದನೆಗಾಗಿ ಶಿಫಾರಸುಮಾಡುವುದು;

(8) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ವಿನಿಯಮಗಳನ್ನು ರಚಿಸುವುದು ಮತ್ತು ಪ್ರವೇಶಾತಿ ಪಡೆಯುವ ವಿದ್ಯಾರ್ಥಿಗಳ ಸಂಖ್ಯೆಯನ್ನು ನಿರ್ಧರಿಸುವುದು;

(9) ಇತರ ವಿಶ್ವವಿದ್ಯಾಲಯಗಳ ಮತ್ತು ಸಂಸ್ಥೆಗಳ ಡಿಪ್ಲೋಮಾ ಮತ್ತು ಪದವಿಗಳನ್ನು ಮಾನ್ಯ ಮಾಡುವುದು ಮತ್ತು ವಿಶ್ವವಿದ್ಯಾಲಯದ ಡಿಪ್ಲೋಮಾ ಮತ್ತು ಪದವಿಗಳ ಸಂಬಂಧದಲ್ಲಿ ಅವುಗಳ ಸಮಾನತೆಯನ್ನು ನಿರ್ಧರಿಸುವುದು;

(10) ಕಾರ್ಯನಿರ್ವಾಹಕ ಪರಿಷತ್ತು ಅಂಗೀಕರಿಸಿರುವ ಯಾವುದೇ ನಿಬಂಧನೆಗಳಿಗೊಳಪಟ್ಟು ಫೆಲೋಷಿಪ್‌ಗಳು, ವಿದ್ಯಾರ್ಥಿವೇತನಗಳು ಹಾಗೂ ಇನ್ನಿತರ ಬಹುಮಾನಗಳಿಗಾಗಿ ಸ್ಪರ್ಧೆಯ ಮತ್ತು ಅವನ್ನು ಪ್ರದಾನಮಾಡುವ ಸಮಯ, ವಿಧಾನ ಮತ್ತು ಷರತ್ತುಗಳನ್ನು ನಿಗದಿಪಡಿಸುವುದು;

(11) ಪರೀಕ್ಷರ ನೇಮಕಾತಿಯನ್ನು ಅನುಮೋದಿಸುವುದು ಮತ್ತು ಅವಶ್ಯಕತೆಯಿದ್ದಲ್ಲಿ ಅವರನ್ನು ತೆಗೆದು ಹಾಕುವುದು ಮತ್ತು ಅವರ ಶುಲ್ಕಗಳು, ಉಪಲಬ್ಧಗಳು ಮತ್ತು ಪ್ರಯಾಣ ಹಾಗೂ ಇತರ ಭತ್ಯೆಗಳನ್ನು ನಿಗದಿ ಪಡಿಸುವುದು;

(12) ಸ್ಟೈಪೆಂಡುಗಳು, ವಿದ್ಯಾರ್ಥಿವೇತನಗಳು, ಪದಕಗಳು ಮತ್ತು ಬಹುಮಾನಗಳು ಹಾಗೂ ಇತರ ಅವಾರ್ಡುಗಳನ್ನು ವಿನಿಯಮಗಳು ಮತ್ತು ಅವಾರ್ಡುಗಳಿಗೆ ಸಂಬಂಧಿಸಿದಂತಹ ಇತರ ಷರತ್ತುಗಳ ಅನುಸಾರ ಪ್ರದಾನ ಮಾಡುವುದು;

(13) ಶೈಕ್ಷಣಿಕ ವರ್ಷವೊಂದರಲ್ಲಿ ಮೂರಕ್ಕೆ ಮೀರದ ಗೌರವ ಪದವಿಗಳನ್ನು, ಪ್ರದಾನ ಮಾಡುವ ಕುರಿತಾಗಿ ಕಾರ್ಯನಿರ್ವಾಹಕ ಪರಿಷತ್ತಿಗೆ ಶಿಫಾರಸು ಮಾಡುವುದು;

(14) ವಿಶ್ವವಿದ್ಯಾಲಯದ ಶಿಕ್ಷಕರ ಮತ್ತು ಸೇವಾ ಸಿಬ್ಬಂದಿಗಳ ನೇಮಕಾತಿ ಮತ್ತು ಬಡ್ತಿಗಾಗಿ ಗೊತ್ತುಪಡಿಸಬಹುದಾದ ಅರ್ಹತೆಗಳ ಕುರಿತು ಶಿಫಾರಸು ಮಾಡುವುದು;

(15) ಶೈಕ್ಷಣಿಕ, ಸಂಶೋಧನೆ, ಕಾರ್ಪೋರೇಟ್ ಮತ್ತು ಇತರ ಸಂಸ್ಥೆಗಳ ಜೊತೆಗಿನ ಒಡಂಬಡಿಕೆ ಜ್ಞಾಪನಾ ಪತ್ರ ಹಾಗು ಒಪ್ಪಂದ ಜ್ಞಾಪನಾ ಪತ್ರ ಮತ್ತು ಸಾರ್ವಜನಿಕ ಖಾಸಗಿ ಪಾಲುದಾರಿಕೆ ಒಪ್ಪಂದವನ್ನು ಪರಿಶೀಲಿಸುವುದು ಮತ್ತು ಅನುಮೋದಿಸುವುದು;

(16) ಶೈಕ್ಷಣಿಕ ವಿಚಾರಗಳ ಸಂಬಂಧದಲ್ಲಿ, ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳನ್ನು ಸಮರ್ಪಕವಾಗಿ ಜಾರಿಗೊಳಿಸುವುದಕ್ಕಾಗಿ ಅವಶ್ಯಕವಾಗಿರಬಹುದಾದ ಅಂಥ ಎಲ್ಲಾ ಕರ್ತವ್ಯಗಳನ್ನು ಮತ್ತು ಎಲ್ಲಾ ಕ್ರಮಗಳನ್ನು ಕೈಗೊಳ್ಳುವುದು.

**35. ಶೈಕ್ಷಣಿಕ ಪರಿಷತ್ತಿನ ಸಭೆಗಳ ಕಾರ್ಯವಿಧಾನ.–** (1) ಶೈಕ್ಷಣಿಕ ಪರಿಷತ್ತು ಸಾಧಾರಣವಾಗಿ ಕನಿಷ್ಠಪಕ್ಷ ಪ್ರತಿ ನಾಲ್ಕು ತಿಂಗಳಿಗೊಮ್ಮೆ ಕುಲಪತಿಗಳೂ ನಿಗದಿಪಡಿಸುವ ದಿನಾಂಕದಂದು ಸಭೆ ಸೇರತಕ್ಕದ್ದು. ಆದರೆ, ಕುಲಪತಿಗಳು ಶೈಕ್ಷಣಿಕ ಪರಿಷತ್ತಿನ ವಿಶೇಷ ಸಭೆಯನ್ನು ಕರೆಯಬಹುದು.

(2) ಶೈಕ್ಷಣಿಕ ಪರಿಷತ್ತಿನ ಸಭೆಗೆ ಶೈಕ್ಷಣಿಕ ಪರಿಷತ್ತಿನ ಮೂರನೇ ಒಂದು ಭಾಗದ ಸದಸ್ಯರು ಕೋರಂ ಆಗಿರತಕ್ಕದ್ದು. ಆದಾಗ್ಯೂ, ಶೈಕ್ಷಣಿಕ ಪರಿಷತ್ತಿನ ಮುಂದುವರೆದ ಸಭೆಗೆ ಕೋರಂ ಅಗತ್ಯವಿರತಕ್ಕದ್ದಲ್ಲ.

(3) ಸದಸ್ಯರಲ್ಲಿ ಭಿನ್ನಾಭಿಪ್ರಾಯಗಳುಂಟಾದ ಸಂದರ್ಭದಲ್ಲಿ ಬಹುಮತಾಭಿಪ್ರಾಯವು ಪ್ರಭಾವವುಳ್ಳದ್ದಾಗಿರತಕ್ಕದ್ದು.

(4) ಶೈಕ್ಷಣಿಕ ಪರಿಷತ್ತಿನ ಪ್ರತಿಯೊಬ್ಬ ಸದಸ್ಯನು, ಶೈಕ್ಷಣಿಕ ಪರಿಷತ್ತಿನ ಅಧ್ಯಕ್ಷರೂ ಸೇರಿದಂತೆ, ಒಂದು ಮತವನ್ನು ಹೊಂದಿರತಕ್ಕದ್ದು ಮತ್ತು ಶೈಕ್ಷಣಿಕ ಪರಿಷತ್ತು ನಿರ್ಣಯಿಸಬೇಕಿರುವ ಯಾವುದೇ ಪ್ರಶ್ನೆ ಮೇಲಿನ ಮತವು ಸಮಾನವಾಗಿದ್ದಲ್ಲಿ ಶೈಕ್ಷಣಿಕ ಪರಿಷತ್ತಿನ ಅಧ್ಯಕ್ಷರು ಅಥವಾ ಸಂದರ್ಭಾನುಸಾರ, ಸಭೆಯ ಅಧ್ಯಕ್ಷತೆವಹಿಸಿರುವ ಸದಸ್ಯರು, ಹೆಚ್ಚುವರಿಯಾಗಿ, ನಿರ್ಣಾಯಕ ಮತವನ್ನು ಚಲಾಯಿಸತಕ್ಕದ್ದು.

(5) ಶೈಕ್ಷಣಿಕ ಪರಿಷತ್ತಿನ ಅಧ್ಯಕ್ಷರು ಶೈಕ್ಷಣಿಕ ಪರಿಷತ್ತಿನ ಪ್ರತಿ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರ ಅನುಪಸ್ಥಿತಿಯಲ್ಲಿ ಉಪಸ್ಥಿತರಿರುವ ಅತಿ ಹಿರಿಯ ನಿರ್ದೇಶಕರು ವಹಿಸತಕ್ಕದ್ದು.

(6) ಶೈಕ್ಷಣಿಕ ಪರಿಷತ್ತಿನಿಂದ ತುರ್ತುಕ್ರಮವು ಅವಶ್ಯಕವಾದಲ್ಲಿ ಶೈಕ್ಷಣಿಕ ಪರಿಷತ್ತಿನ ಸದಸ್ಯರುಗಳಿಗೆ ಕಾಗದ–ಪತ್ರಗಳನ್ನು ಸುತ್ತೋಲೆ ಮೂಲಕ ನಡವಳಿಗಳನ್ನು ನಿರ್ವಹಿಸಲು ಶೈಕ್ಷಣಿಕ ಪರಿಷತ್ತಿನ ಅಧ್ಯಕ್ಷರು ಅನುಮತಿಸಬಹುದು. ಶೈಕ್ಷಣಿಕ ಪರಿಷತ್ತಿನ ಸದಸ್ಯರು ಬಹುಮತದಿಂದ ಸಮ್ಮತಿಸಿದ ಹೊರತಾಗಿ ಕೈಗೊಳ್ಳಲು ಪ್ರಸ್ತಾಪಿಸಿದ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ. ಹಾಗೆ ಕೈಗೊಳ್ಳಲಾದ ಕ್ರಮದ ಕುರಿತು ಶೈಕ್ಷಣಿಕ ಪರಿಷತ್ತಿನ ಎಲ್ಲಾ ಸದಸ್ಯರುಗಳಿಗೆ ಆ ಕೂಡಲೆ ಮಾಹಿತಿಗಳನ್ನು ನೀಡತಕ್ಕದ್ದು. ಶೈಕ್ಷಣಿಕ ಪರಿಷತ್ತಿನ ಮುಂದಿನ ಸಭೆಯಲ್ಲಿ ಕಾಗದ–ಪತ್ರಗಳನ್ನು ಮಾಹಿತಿಗಾಗಿ ಮಂಡಿಸತಕ್ಕದ್ದು.

**36. ಸದಸ್ಯರು ಪರಿಶ್ರಮಧನ ಪಡೆಯಲು ಹಕ್ಕುಳ್ಳವರಾಗಿರುವುದಿಲ್ಲ.–** ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರು, ವಿನಿಯಮದಲ್ಲಿ ನಿರ್ದಿಷ್ಟಪಡಿಸಿರಬಹುದಾದಂಥ ಪ್ರವಾಸಭತ್ಯೆ ಮತ್ತು ದಿನಭತ್ಯೆಯನ್ನು ಹೊರತುಪಡಿಸಿ, ವಿಶ್ವವಿದ್ಯಾಲಯದಿಂದ ಯಾವುದೇ ಪರಿಶ್ರಮಧನವನ್ನು ಪಡೆಯಲು ಅರ್ಹರಾಗಿರತಕ್ಕದ್ದಲ್ಲ:

ಪರಂತು, ಈ ಪ್ರಕರಣದಲ್ಲಿರುವುದಾವುದೂ, ಯಾವೊಬ್ಬ ಸದಸ್ಯನು, ಆತನು ಹೊಂದಿರುವ ಪದದ ಕಾರಣದಿಂದಾಗಿ ಅರ್ಹನಾಗಿರುವ ಉಪಲಬ್ಧಿಗಳನ್ನು ಪಡೆಯಲು ಅಡ್ಡಿಯುಂಟು ಮಾಡತಕ್ಕದ್ದಲ್ಲ.

**37. ಹಣಕಾಸು ಸಮಿತಿ.–** (1) ಕಾರ್ಯನಿರ್ವಾಹಕ ಪರಿಷತ್ತಿನಿಂದ ರಚಿಸಿರುವ ಹಣಕಾಸು ಸಮಿತಿಯು ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಕುಲಪತಿಗಳು – ಅಧ್ಯಕ್ಷರು;

(ಬಿ) ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಅಥವಾ ಅವರು ನಾಮನಿರ್ದೇಶನ ಮಾಡಿದ ಉಪಕಾರ್ಯದರ್ಶಿ ಹುದ್ದೆಗೆ ಕಡಿಮೆ ಇಲ್ಲದಂಥ ಅಧಿಕಾರಿ;

(ಸಿ) ಸರ್ಕಾರದ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಅಥವಾ ಅವರು ನಾಮನಿರ್ದೇಶನ ಮಾಡಿದ ಉಪಕಾರ್ಯದರ್ಶಿ ಹುದ್ದೆಗೆ ಕಡಿಮೆ ಇಲ್ಲದಂಥ ಅಧಿಕಾರಿ;

(ಡಿ) ಕಾರ್ಯ ನಿರ್ವಾಹಕ ಪರಿಷತ್ತಿನ ಸದಸ್ಯರುಗಳ ಪೈಕಿಯಿಂದ ಕುಲಪತಿಗಳು ನಾಮನಿರ್ದೇಶಿಸಿದ ಇಬ್ಬರು ಸದಸ್ಯರು;

(ಇ) ಕುಲಸಚಿವರು;

(ಎಫ್) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆಯ ನಿರ್ದೇಶಕರು;

(ಜಿ) ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ;

(ಹೆಚ್) ಹಣಕಾಸು ಅಧಿಕಾರಿಯು ಸದಸ್ಯಕಾರ್ಯದರ್ಶಿಗಳಾಗಿರತಕ್ಕದ್ದು.

(2) ಕುಲಪತಿಗಳನ್ನು ಮತ್ತು ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಹಣಕಾಸು ಸಮಿತಿಯ ಸದಸ್ಯರು ಮೂರು ವರ್ಷಗಳವರೆಗೆ ಪದವನ್ನು ಹೊಂದಿರತಕ್ಕದ್ದು.

(3) ಹಣಕಾಸು ಸಮಿತಿಯ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(ಎ) ವಿಶ್ವವಿದ್ಯಾಲಯದ ವಾರ್ಷಿಕ ಆಯವ್ಯಯವನ್ನು ಪರಿಶೀಲಿಸುವುದು ಮತ್ತು ಪರಿಶೋಧಿಸುವುದು ಹಾಗೂ ಕಾರ್ಯನಿರ್ವಾಹಕ ಪರಿಷತ್ತಿಗೆ ಹಣಕಾಸು ವಿಷಯಗಳ ಕುರಿತು ಶಿಫಾರಸ್ಸುಗಳನ್ನು ಮಾಡುವುದು;

(ಬಿ) ಹೊಸ ಖರ್ಚು ವೆಚ್ಚಗಳಿಗಾಗಿ ಎಲ್ಲಾ ಪ್ರಸ್ತಾವನೆಗಳನ್ನು ಪರಿಶೀಲಿಸುವುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿಗೆ ಶಿಫಾರಸ್ಸುಗಳನ್ನು ಮಾಡುವುದು.

(ಸಿ) ಲೆಕ್ಕ ಪತ್ರಗಳ ನಿಯತಕಾಲಿಕ ಹೇಳಿಕೆಗಳನ್ನು ಪರಿಶೀಲಿಸುವುದು ಮತ್ತು ಕಾಲಕಾಲಕ್ಕೆ ವಿಶ್ವವಿದ್ಯಾಲಯದ ಹಣಕಾಸುಗಳನ್ನು ಪುನಪರಿಶೀಲಿಸುವುದು ಮತ್ತು ಹೇಳಿಕೆಗಳ ಮರು ಹೊಂದಾಣಿಕೆಗಳನ್ನು ಮತ್ತು ಲೆಕ್ಕ ಪರಿಶೋಧಕರ ವರದಿಗಳನ್ನು ಪರಿಗಣಿಸುವುದು ಹಾಗೂ ಕಾರ್ಯ ನಿರ್ವಾಹಕ ಪರಿಷತ್ತಿಗೆ ಶಿಫಾರಸ್ಸುಗಳನ್ನು ಮಾಡುವುದು.

(ಡಿ) ತನ್ನ ಸ್ವತಃ ಕ್ರಮದಿಂದ ಅಥವಾ ಕಾರ್ಯನಿರ್ವಾಹಕ ಪರಿಷತ್ತಿನ ಅಥವಾ ಕುಲಪತಿಗಳ ನಿರ್ದೇಶನದ ಮೇರೆಗೆ ವಿಶ್ವವಿದ್ಯಾಲಯವನ್ನು ಬಾಧಿಸುವ ಯಾವುದೇ ಹಣಕಾಸು ಪ್ರಶ್ನೆಯ ಮೇಲೆ ಕಾರ್ಯನಿರ್ವಾಹಕ ಪರಿಷತ್ತಿಗೆ ತನ್ನ ಅಭಿಪ್ರಾಯಗಳನ್ನು ನೀಡುವುದು ಮತ್ತು ಶಿಫಾರಸ್ಸುಗಳನ್ನು ಮಾಡುವುದು.

(ಇ) ಈ ಅಧಿನಿಯಮದ ಅಡಿಯಲ್ಲಿ ರಚಿಸಿರುವ ವಿನಿಯಮಗಳ ಮೂಲಕ ಅದಕ್ಕೆ ವಹಿಸಿರುವ ಇತರ ಯಾವುದೇ ಪ್ರಕಾರ್ಯವನ್ನು ನಿರ್ವಹಿಸುವುದು.

(4) ಹಣಕಾಸು ಸಮಿತಿಯು ಪ್ರತಿವರ್ಷ ಕನಿಷ್ಠ ಎರಡು ಬಾರಿ ಸಭೆ ಸೇರತಕ್ಕದ್ದು ಮೂವರು ಸದಸ್ಯರುಗಳ ಉಪಸ್ಥಿತಿಯು ಹಣಕಾಸು ಸಮಿತಿಯ ಕೋರಂ ಆಗಿರತಕ್ಕದ್ದು.

(5) ಹಣಕಾಸು ಸಮಿತಿಯ ಸಭೆಗಳ ಅಧ್ಯಕ್ಷತೆಯನ್ನು ಕುಲಪತಿಗಳು ವಹಿಸತಕ್ಕದ್ದು. ಸದಸ್ಯರುಗಳಲ್ಲಿ ಬಿನ್ನಾಭಿಪ್ರಾಯ ಮೂಡಿದ ಸಂದರ್ಭದಲ್ಲಿ ಅಧ್ಯಕ್ಷರ ತೀರ್ಮಾನದ ಪ್ರಭಾವವಿರತಕ್ಕದ್ದು.

**38. ವ್ಯಾಸಂಗ ವಿಭಾಗ ಪರಿಷತ್ತು.–** ವ್ಯಾಸಂಗ ವಿಭಾಗ ಪರಿಷತ್ತು, ವ್ಯಾಸಂಗ ವಿಭಾಗದ ಸದಸ್ಯರು ಮತ್ತು ಪ್ರಾದೇಶಿಕ ಶಾಲೆಗಳ ಮುಖ್ಯಸ್ಥರು ಹಾಗೂ ಸಂಬಂಧಿತ ವಿಷಯಗಳ ಇತರ ಪರಿಣಿತರನ್ನು ಒಳಗೊಂಡ ಶಾಲಾ ಮುಖ್ಯಸ್ಥರ ಪರಿಷತ್ತಾಗಿರತಕ್ಕದ್ದು. ಇದು ಸಮಾಲೋಚನೆ ಮತ್ತು ಚರ್ಚೆಗಳ ನಿರಂತರ ಪ್ರಕ್ರಿಯೆಯ ಮೂಲಕ ಸಂಸ್ಥೆ, ಶಿಕ್ಷಣ, ಸಂಶೋಧನೆಯ ಗುಣಮಟ್ಟಗಳನ್ನು ಉತ್ತಮಗೊಳಿಸಲು ಮತ್ತು ನಿರ್ವಹಿಸಲು ಹೊಣೆಯಾಗಿರತಕ್ಕದ್ದು.

**39. ಇತರ ಪ್ರಾಧಿಕಾರಗಳು.–** ಕಾರ್ಯನಿರ್ವಾಹಕ ಪರಿಷತ್ತು ಅಗತ್ಯವೆಂದು ಭಾವಿಸಬಹುದಾದಂಥ ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳನ್ನು ರಚಿಸಬಹುದು ಮತ್ತು ಅವುಗಳ ರಚನೆ ಮತ್ತು ಕಾರ್ಯನಿರ್ವಹಣೆ ವಿನಿಯಮಗಳ ಮೂಲಕ ನಿಯಮಿಸಿದಂತೆ ಇರತಕ್ಕದ್ದು.

**40. ಸಮಿತಿಗಳು.–** ವಿಶ್ವವಿದ್ಯಾಲಯ ಪ್ರತಿಯೊಂದು ಪ್ರಾಧಿಕಾರವು ಅದರ ಪ್ರಕಾರ್ಯಗಳಲ್ಲಿ ನೆರವಾಗಲು ಸಮಿತಿಗಳನ್ನು ರಚಿಸುವ ಅಥವಾ ಮರಾರಚಿಸುವ ಅಧಿಕಾರ ಹೊಂದಿರತಕ್ಕದ್ದು ಮತ್ತು ಅದು ಸೂಕ್ತವೆಂದು ಭಾವಿಸುವಂಥ ಅದರ ಅಧಿಕಾರಗಳನ್ನು ಪ್ರತ್ಯಾಯೋಜಿಸುವುದು; ಅಂಥ ಸಮಿತಿಗಳು ಅನ್ಯಥಾ ಉಪಬಂಧಿಸಿದುದನ್ನುಳಿದು, ಸಂಬಂಧಪಟ್ಟ ಪ್ರಾಧಿಕಾರದ ಸದಸ್ಯರುಗಳನ್ನು ಹಾಗೂ ಪ್ರಾಧಿಕಾರವು ಪ್ರತಿಯೊಂದು ಪ್ರಕರಣದಲ್ಲಿ ನಿರ್ದೇಶಿಸಬಹುದಾದ ಅಂಥ ವ್ಯಕ್ತಿಯನ್ನು ಒಳಗೊಂಡಿರತಕ್ಕದ್ದು.

**41. ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ.–** (1) ಸಂಶೋಧನೆ, ಅನ್ವೇಷಣೇ ಮತ್ತು ಮೌಲ್ಯಮಾಪನಾ ಕೇಂದ್ರವು ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಗಳು – ಅಧ್ಯಕ್ಷರು;

(ii) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆಯ ನಿರ್ದೇಶಕರು;

(iii) ಹಣಕಾಸು ಅಧಿಕಾರಿ;

(iv) ಶಾಲೆಗಳ ಮತ್ತು ಪ್ರಾದೇಶಿಕ ಕೇಂದ್ರಗಳ ಎಲ್ಲಾ ಮುಖ್ಯಸ್ಥರು;

(v) ಕುಲಪತಿಗಳು ನಾಮ ನಿರ್ದೇಶನ ಮಾಡಿರುವ ಗ್ರಾಮೀಣಾಭಿವೃದ್ಧಿಯಲ್ಲಿ ವಿಶೇಷ ಜ್ಞಾನ ಮತ್ತು ಅನುಭವವನ್ನು ಹೊಂದಿರುವ ಇಬ್ಬರು ಪ್ರಗತಿಪರ ರೈತರು;

(vi) ಆಯುಕ್ತರು, ಉದ್ಯೋಗ ಮತ್ತು ತರಬೇತಿ, ಕರ್ನಾಟಕ ಸರ್ಕಾರ;

(vii) ನಿರ್ದೇಶಕರು, ಸರ್ಕಾರಿ ಟೂಲ್ ರೂಮ್ ಮತ್ತು ತರಬೇತಿ ಕೇಂದ್ರ;

(viii) ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ;

(ix) ನಿರ್ದೇಶಕರು, ನಿರ್ಮಿತಿ ಕೇಂದ್ರ;

(x) ನಿರ್ದೇಶಕರು, ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು;

(xi) ನಿರ್ದೇಶಕರು, ಪಂಚಾಯತ್ ರಾಜ್;

(xii) ಕರ್ನಾಟಕ ರಾಜ್ಯ ಗ್ರಾಮೀಣ ಜೀವನಾಧಾರ ಪ್ರವರ್ತನಾ ಸೊಸೈಟಿಯ ಪ್ರತಿನಿಧಿ;

(xiii) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ;

(xiv) ನಿರ್ದೇಶಕರು, ಆಯುಷ್;

(xv) ವಿಶ್ವವಿದ್ಯಾಲಯದ ಸೇವೆಯಲ್ಲಿ ಇಲ್ಲದಿರುವ ರಾಜ್ಯ ಸರ್ಕಾರವು ನಾಮ ನಿರ್ದೇಶನ ಮಾಡಿರುವ ಇಬ್ಬರು ಶ್ರೇಷ್ಠ ಶಿಕ್ಷಣತಜ್ಞರು;

(xvi) ಸರ್ಕಾರವು ನಾಮನಿರ್ದೇಶಿಸಿದ ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿಯಿಂದ ತಲಾ ಒಬ್ಬ ಸದಸ್ಯರು ಅವರ ಪೈಕಿ ಒಬ್ಬರು ಮಹಿಳೆಯಾಗಿರತಕ್ಕದ್ದು;

(xvii) ಯಾವುದೇ ಸಭೆಯ ಸಂಬಂಧದಲ್ಲಿ ಅಂತಹ ಸಭೆಯ ಕಾರ್ಯಸೂಚಿಯ ವಿಷಯಗಳ ಕುರಿತಾಗಿ ಅವರ ಪರಿಣಿತ ಜ್ಞಾನದ ಪ್ರಯೋಜನವನ್ನು ಪಡೆಯುವುದಕ್ಕಾಗಿ ರಾಜ್ಯ ಸರ್ಕಾರವು ನಾಮ ನಿರ್ದೇಶಿಸಿದ ಒಬ್ಬರು ಕೃಷಿ – ಕೈಗಾರಿಕೋದ್ಯಮಿ;

(xviii) ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನ ಕೇಂದ್ರ – ಸದಸ್ಯ–ಕಾರ್ಯದರ್ಶಿ.

2. ಅಧ್ಯಕ್ಷರು, ಈ ಮುಂದಿನ ಯಾವೊಬ್ಬ ಸದಸ್ಯರನ್ನು ಅಗತ್ಯವಿರುವಾಗಲೆಲ್ಲಾ ಸಭೆಗೆ ಹಾಜರಾಗುವಂತೆ ಆಮಂತ್ರಿಸಬಹುದು.

(i) ನಿರ್ದೇಶಕರು, ತೋಟಗಾರಿಕೆ ಅಥವಾ ನಿರ್ದೇಶಕರು, ರೇಷ್ಮೆ;

(ii) ನಿರ್ದೇಶಕರು, ಕೃಷಿ, ಕರ್ನಾಟಕ ಸರ್ಕಾರ;

(iii) ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಸಂಶೋಧನೆ ಮತ್ತು ತರಬೇತಿ, ಕರ್ನಾಟಕ ಸರ್ಕಾರ;

(iv) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ, ಅಭಿವೃದ್ಧಿ ನಿಯಮಿತ;

(v) ಮುಖ್ಯಕಾರ್ಯನಿರ್ವಹಣಾ ಅಧಿಕಾರಿ, ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗ;

(vi) ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಥವಾ ಆತನ ನಾಮನಿರ್ದೇಶಿತರು;

(vii) ನಿರ್ದೇಶಕರು, ನೀರು ಸರಬರಾಜು ಮತ್ತು ನೈರ್ಮಲ್ಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ;

(viii) ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ವಸತಿ ನಿಗಮ;

(ix) ಆಯುಕ್ತರು, ಜವಳಿ;

(x) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾಬೂನು ಮತ್ತು ಮಾರ್ಜಕಗಳು ನಿಯಮಿತ.

3. ಸಭೆಯ ಕಾರ್ಯವಿಧಾನವು ವಿನಿಯಮಗಳಲ್ಲಿ ಕಾಲಕಾಲಕ್ಕೆ ಹೇಳಲಾದಂತೆ ಇರತಕ್ಕದ್ದು.

**42. ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರದ ಪ್ರಕಾರ್ಯಗಳು.– (1)** ವಿಶ್ವವಿದ್ಯಾಲಯದ ಎಲ್ಲಾ ಸಂಶೋಧನೆ ಮತ್ತು ಅನ್ವೇಷಣಾ ಚಟುವಟಿಕೆಗಳನ್ನು ಕುಲಪತಿಗಳ ನಿಯಂತ್ರಣದಡಿ ವಿನಿಯಮಗಳಲ್ಲಿ ನಿಯಮಿಸಲಾದ ರೂಢಿಗಳ ಅನುಸಾರವಾಗಿ ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರದ ಅಡಿಯಲ್ಲಿ ಅಧಿಕಾರಿಗಳು ಅಥವಾ ಬೋಧಕರು ಅಥವಾ ಸಂಶೋಧಕರ ಮೂಲಕ ನಿರ್ವಹಿಸತಕ್ಕದ್ದು.

(2) ಸಂಶೋಧನೆ ಮತ್ತು ಅನ್ವೇಷಣೆ ಕೇಂದ್ರವು ಈ ಮುಂದಿನ ಶಿಫಾರಸ್ಸುಗಳನ್ನು ಮಾಡತಕ್ಕದ್ದು:–

(i) ಪರಿಣಾಮಕಾರಿ ಸಮನ್ವಯತೆಯನ್ನು ವೃದ್ಧಿಸುವ ದೃಷ್ಟಿಯೊಂದಿಗೆ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಹಾಗೂ ಇನ್ನಿತರ ಸಂಬಂಧಿತ ವಸ್ತು ವಿಷಯಗಳಲ್ಲಿ ಹಲವಾರು ವಿಶ್ವ ವಿದ್ಯಾಲಯ ಘಟಕಗಳ ಮೂಲಕ ಕೈಗೆತ್ತಿಕೊಳ್ಳುವ ಅಥವಾ ಕೈಗೆತ್ತಿಕೊಳ್ಳಬೇಕಾದ ಸಂಶೋಧನಾ ಕಾರ್ಯಕ್ರಮಗಳು ಮತ್ತು ಯೋಜನೆಗಳು;

(ii) ಸಂಶೋಧನಾ ಕಾರ್ಯ ಯೋಜನೆಗಳನ್ನು ಅನುಷ್ಠಾನಗೊಳಿಸುವುದಕ್ಕಾಗಿ ಅಗತ್ಯವಿರುವ ಭೌತಿಕ, ವಿತ್ತೀಯ ಮತ್ತು ಆಡಳಿತಾತ್ಮಕ ಸೌಲಭ್ಯಗಳು;

(iii) ಗ್ರಾಮೀಣ ಮಧ್ಯಸ್ಥಗಾರರ (stakeholders) ಅಗತ್ಯತೆಗಳನ್ನು ಪೂರೈಸಲು ಸಂಶೋಧನೆಯನ್ನು ಅಭಿಮುಖವಾಗಿಸುವುದು;

(iv) ಭೋದನೆಯಲ್ಲಿ ಮತ್ತು ವಿಸ್ತರಣಾ ಚಟುವಟಿಕೆಗಳಲ್ಲಿ ಸಂಶೋಧನೆ, ವಿಸ್ತರಣೆ, ಬೋಧನೆ ಹಾಗೂ ಸಂಶೋಧನಾಕಾರರ ಭಾಗವಹಿಸುವಿಕೆಯನ್ನು ಸಂಯೋಜನೆಗೊಳಿಸುವುದು;

(v) ಸಂಶೋಧನೆಯಲ್ಲಿ ಸಾರ್ವಜನಿಕ, ಖಾಸಗಿ ಮತ್ತು ಗ್ರಾಮೀಣ ಸಮುದಾಯವನ್ನು ಪೋಷಿಸುವುದು ಮತ್ತು ಸಮನ್ವಯಗೊಳಿಸುವುದು;

(vi) ಅಪ್ಪಟ, ಅನ್ವಯಿಕ ಮತ್ತು ಭಾಗೀದಾರಿಕ ಸಂಶೋಧನೆ ಹಾಗೂ ಪರಿಸರ ಸ್ನೇಹಿ ತಂತ್ರಜ್ಞಾನಗಳನ್ನು ಅಭಿವೃದ್ಧಿಪಡಿಸುವ ಮೂಲಕ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್‌ಗೆ ಬೆಂಬಲಿಸುವ ಅಂಶಗಳು;

(vii) ಸಮುದಾಯಗಳು, ಸರ್ಕಾರ, ಸಂಬಂಧಪಟ್ಟ ಸಂಶೋಧನಾ ಸಂಸ್ಥೆಗಳು ಹಾಗೂ ಸರ್ಕಾರೇತರ ಸಂಘಟನೆಗಳು ಮತ್ತು ಸಂಸ್ಥೆಗಳು ಒಳಗೊಂಡಂತೆ, ಇನ್ನಿತರ ಅಭಿವೃದ್ಧಿ ಏಜೆನ್ಸಿಗಳೊಂದಿಗೆ ಪಾಲುದಾರಿಕೆಯಲ್ಲಿ ವಿನೂತನ ಚಟುವಟಿಕೆಗಳು, ಅಭಿವೃದ್ಧಿ ಮತ್ತು ಸಂಶೋಧನೆಯನ್ನು ಉತ್ತೇಜಿಸುವುದು;

(viii) ಪರಸ್ಪರ ಕಲಿಕೆ (cross learning) ವಿನಿಮಯ ಹಾಗೂ ಸಂಶೋಧನಾ ಉದ್ದೇಶಗಳಿಗಾಗಿ ರಾಜ್ಯ ಅಥವಾ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಏಜೆನ್ಸಿಗಳೊಂದಿಗೆ ಪಾಲುದಾರಿಕೆ;

(ix) ಸ್ವಾವಲಂಬನೆಯನ್ನು ಸಾಧಿಸಲು ಪರಿಣಾಮಕಾರಿ ಬಳಕೆಗಾಗಿ ಇಂಧನ ಮಾಧ್ಯಮಗಳನ್ನು (ವಿದ್ಯುತ್, ಕಟ್ಟಿಗೆ, ಗಾಳಿ, ಜೈವಿಕ ಅನಿಲ, ಜೀವರಾಶಿ, ಸೌರ) ಮತ್ತು ವ್ಯವಸ್ಥೆಗಳನ್ನು ಒಟ್ಟುಗೂಡಿಸುವುದು;

(x) ಗ್ರಾಮೀಣ ಸಮುದಾಯಗಳಲ್ಲಿ ರೂಢಿಯಲ್ಲಿರುವ ಜನಾಂಗೀಯ ಸಾಂಸ್ಕೃತಿಕ ಪರಂಪರೆ, ಪಾರಂಪರಿಕ ಜ್ಞಾನ ಕೌಶಲತೆ ಮತ್ತು ವ್ಯವಹಾರ ಚಾತುರ್ಯದ ಮೌಲ್ಯಮಾಪನ ಮತ್ತು ವಾಣಿಜ್ಯಕರಣಗೊಳಿಸುವುದಕ್ಕಾಗಿ ಹಾಗೂ ಅನ್ವೇಷಣಾದಾರರಿಗೆ ಹಾಗೂ ಹಿತಾಸಕ್ತರಿಗೆ ಆರ್ಥಿಕ ಲಾಭವನ್ನು ನೀಡುವುದಕ್ಕಾಗಿ ಸಂಶೋಧನಾ ಅವಕಾಶಗಳನ್ನು ಸೃಜಿಸುವುದು;

(xi) ಸಮಗ್ರ ಕೃಷಿ ವ್ಯವಸ್ಥೆ ಮಾರ್ಗದ (ಕೃಷಿ – ತೋಟಗಾರಿಕೆ – ವೃಕ್ಷ ಕೃಷಿ – ಪಶುಸಂಗೋಪನೆ) ಮುಖಾಂತರ ವಿವೇಕಯುತ ಪ್ರಾಕೃತಿಕ ಸಂಪನ್ಮೂಲ ನಿರ್ವಹಣಾ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಮತ್ತು ಅತ್ಯಧಿಕ ಆದಾಯ ಉತ್ಪತ್ತಿ ಮಾಡುವ ಮುಖಾಂತರ ಕೃಷಿ ಉತ್ಪಾದನೆಯನ್ನು ಉತ್ತಮಗೊಳಿಸಲು ನೀತಿಗಳನ್ನು ರೂಪಿಸುವುದು ಹಾಗೂ ಆಚರಣೆಗಳನ್ನು ಉತ್ತೇಜಿಸುವುದು;

(xii) ಗ್ರಾಮೀಣ ಮೂಲಸೌಕರ್ಯ, ಕೃಷಿ ಮತ್ತು ಕೃಷಿಯೇತರ ಆಧಾರಿತ ಕೈಗಾರಿಕೆಗಳು, ಉದ್ಯಮಶೀಲತ್ವ ಅಭಿವೃದ್ಧಿ ಹಾಗೂ ಮಾರುಕಟ್ಟೆ ಸಂಬಂಧಗಳಿಗಾಗಿ, ಉದ್ಯೋಗ ಮತ್ತು ಸಂಪತ್ತು ಸೃಜನೆಗೆ ಅವಕಾಶ ನೀಡುವ ಮತ್ತು ನಗರಗಳಿಗೆ ವಲಸೆಯನ್ನು ತಪ್ಪಿಸಲು ಸಹಾಯಕವಾಗುವ ನೀತಿಗಳು.

(xiii) ವಿಶ್ವವಿದ್ಯಾಲಯದ ಕುಲಪತಿಗಳು ಅಥವಾ ಕಾರ್ಯನಿರ್ವಾಹಕ ಪರಿಷತ್ತು ಅಥವಾ ಇತರ ಯಾವುದೇ ಪ್ರಾಧಿಕಾರವು ಪ್ರಸ್ತಾಪಿಸಬಹುದಾದಂತಹ ಸಂಶೋಧನಾ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಇತರ ಯಾವುವೇ ವಿಚಾರಗಳು.

**43. ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ ಕೇಂದ್ರ.–** (1) ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ ಕೇಂದ್ರವು ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಗಳು – ಅಧ್ಯಕ್ಷರು;

(ii) ನಿರ್ದೇಶಕರು ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ;

(iii) ಹಣಕಾಸು ಅಧಿಕಾರಿ;

(iv) ಎಲ್ಲಾ ಶಾಲೆಗಳ ಮತ್ತು ಪ್ರಾದೇಶಿಕ ಕೇಂದ್ರಗಳ ಮುಖ್ಯಸ್ಥರು;

(v) ಗ್ರಾಮೀಣಾಭಿವೃದ್ಧಿಯಲ್ಲಿ ವಿಶೇಷ ಜ್ಞಾನ ಮತ್ತು ಅನುಭವ ಹೊಂದಿರುವ, ಕುಲಪತಿಗಳು ನಾಮನಿರ್ದೇಶನ ಮಾಡಿದ ಇಬ್ಬರು ಪ್ರಗತಿಪರ ಗ್ರಾಮಸ್ಥರು;

(vi) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೃಷಿ ಉತ್ಪನ್ನ ಸಂಸ್ಕರಣ ಮತ್ತು ರಫ್ತು ನಿಗಮ ನಿಯಮಿತ, ಬೆಂಗಳೂರು; (ಕೆ.ಎ.ಪಿ.ಪಿ.ಇ.ಸಿ) ಅಥವಾ ಆತನ ನಾಮನಿರ್ದೇಶಿತರು;

(vii) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ;

(viii) ನಿರ್ದೇಶಕರು, ನೀರು ಸರಬರಾಜು ಮತ್ತು ನೈರ್ಮಲ್ಯತೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ;

(ix) ನಿರ್ದೇಶಕರು ನಿರ್ಮಿತಿ ಕೇಂದ್ರ;

(x) ನಿರ್ದೇಶಕರು, ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು;

(xi) ಆಯುಕ್ತರು, ಜವಳಿ;

(xii) ನಿರ್ದೇಶಕರು, ಪಂಚಾಯತ್ ರಾಜ್;

(xiii) ಕರ್ನಾಟಕ ರಾಜ್ಯ ಗ್ರಾಮೀಣ ಜೀವನಾಧಾರ ಪ್ರವರ್ತನ ಸೊಸೈಟಿಯ ಪ್ರತಿನಿಧಿ;

(xiv) ಸರ್ಕಾರವು ನಾಮನಿರ್ದೇಶಿಸಿದ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಹಾಗೂ ಗ್ರಾಮ ಪಂಚಾಯಿತಿಯಿಂದ ತಲಾ ಒಬ್ಬ ಸದಸ್ಯರು ಅವರಲ್ಲಿ ಒಬ್ಬರು ಮಹಿಳೆಯಾಗಿರತಕ್ಕದ್ದು;

(xv) ವ್ಯವಸ್ಥಾಪಕ ನಿರ್ದೇಶಕರು, ಕೈಮಗ್ಗ ಸಂಶೋಧನೆ ಮತ್ತು ಅಭಿವೃದ್ಧಿ ಕೇಂದ್ರ;

(xvi) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಾಲು ಒಕ್ಕೂಟ;

(xvii) ಉಪಾಧ್ಯಕ್ಷರು, ಭಾರತೀಯ ಕೃಷಿ ಕೈಗಾರಿಕಾ ಪ್ರತಿಷ್ಠಾನ;

(xviii) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕರಕುಶಲ ಅಭಿವೃದ್ಧಿ ನಿಗಮ;

(xix) ಮುಖ್ಯಕಾರ್ಯನಿರ್ವಹಣಾಧಿಕಾರಿ (ಸಿಇಒ), ಸಮುದಾಯ ಭಾಗೀದಾರಿಕೆ ಮತ್ತು ಸಬಲೀಕರಣ ಸೊಸೈಟಿ, ಬೇಟದೂರು, ಕಾಂಪೌಡ್, ಮಾಳಮಡ್ಡಿ, ಧಾರವಾಡ– 580007;

(xx) ನಿರ್ದೇಶಕರು, ಕರ್ನಾಟಕ ಸರ್ಕಾರಿ ತರಬೇತಿ ಮತ್ತು ಟೂಲ್ ರೂಮ್ ಕೇಂದ್ರ;

(xxi) ವಲಯ ಯೋಜನಾ ನಿರ್ದೇಶಕರು, ಭಾರತೀಯ ಕೃಷಿ ಅನುಸಂಧಾನ ಪರಿಷತ್ತು;

(xxii) ನಿರ್ಮಿತಿ ಕೇಂದ್ರದ ಪ್ರತಿನಿಧಿ;

(xxiii) ಕರ್ನಾಟಕದಲ್ಲಿನ ಎಲ್ಲಾ ಪ್ರಾದೇಶಿಕ ಗ್ರಾಮೀಣ ಬ್ಯಾಂಕ್‌ಗಳ ಅಧ್ಯಕ್ಷರು;

(xxiv) ವ್ಯವಸ್ಥಾಪಕ ನಿರ್ದೇಶಕರು, ಮೀನುಗಾರಿಕೆ ಅಭಿವೃದ್ಧಿ ನಿಗಮ;

(xxv) ವ್ಯವಸ್ಥಾಪಕ ನಿರ್ದೇಶಕರು, ಅಲ್ಪಸಂಖ್ಯಾತ ಅಭಿವೃದ್ಧಿ ನಿಗಮ;

(xxvi) ವ್ಯವಸ್ಥಾಪಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿಗಮ;

(xxvii) ವ್ಯವಸ್ಥಾಪಕ ನಿರ್ದೇಶಕರು, ಡಾ: ಅಂಬೇಡ್ಕರ್ ಅನುಸೂಚಿತ ಜಾತಿ ಅಭಿವೃದ್ಧಿ ನಿಗಮ;

(xxviii) ವ್ಯವಸ್ಥಾಪಕ ನಿರ್ದೇಶಕರು ಅನುಸೂಚಿತ ಪಂಗಡಗಳ ಅಭಿವೃದ್ಧಿ ನಿಗಮ;

(xxix) ವ್ಯವಸ್ಥಾಪಕ ನಿರ್ದೇಶಕರು, ದೇವರಾಜ್ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ;

(xxx) ನಿರ್ದೇಶಕರು, ಆಹಾರ ಸಂಸ್ಕರಣೆ;

(xxxi) ಕೇಂದ್ರೀಯ ಆಹಾರ ತಂತ್ರಜ್ಞಾನ ಸಂಶೋಧನಾ ಸಂಸ್ಥೆಯ ಪ್ರತಿನಿಧಿ, ಮೈಸೂರು;

(xxxii) ವ್ಯವಸ್ಥಾಪಕ ನಿರ್ದೇಶಕರು, ಕೌಶಲಾಭಿವೃದ್ಧಿ ನಿಗಮ;

(xxxiii) ಕುಲಪತಿಗಳು ನಾಮನಿರ್ದೇಶಿಸಿದ ಶ್ರವ್ಯ, ದೃಶ್ಯ–ಶ್ರವ್ಯ ಮತ್ತು ಮುದ್ರಣ ಮಾಧ್ಯಮದಿಂದ ತಲಾ ಒಬ್ಬ ಪ್ರತಿನಿಧಿ;

(xxxiv) ಸಭೆಯ ಕಾರ್ಯಸೂಚಿಗಳ ಕುರಿತಾಗಿ ವಿಶೇಷ ಪರಿಣಿತ ಜ್ಞಾನದ ಪ್ರಯೋಜನವನ್ನು ಪಡೆಯುವ ಸಲುವಾಗಿ, ಕುಲಪತಿಗಳಿಂದ ನಾಮನಿರ್ದೇಶಿತನಾದ ಒಬ್ಬರು ಕೃಷಿ ಕೈಗಾರಿಕೋದ್ಯಮಿ;

(xxxv) ನಿರ್ದೇಶಕರು, ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ ಕೇಂದ್ರ – ಸದಸ್ಯ–ಕಾರ್ಯದರ್ಶಿ.

(2) ಅಧ್ಯಕ್ಷರು ಈ ಮುಂದಿನ ಯಾವುದೇ ಸದಸ್ಯರುಗಳನ್ನು ಅಗತ್ಯವಿರುವಾಗಲೆಲ್ಲಾ ಸಭೆಗಳಲ್ಲಿ ಭಾಗವಹಿಸಲು ಆಮಂತ್ರಿಸಬಹುದಾಗಿದೆ:–

(i) ನಿರ್ದೇಶಕರು, ತೋಟಗಾರಿಕೆ ಅಥವಾ ನಿರ್ದೇಶಕರು, ರೇಷ್ಮೆ;

(ii) ಆಯುಕ್ತರು, ಕೃಷಿ, ಕರ್ನಾಟಕ ಸರ್ಕಾರ;

(iii) ಆಯುಕ್ತರು, ಉದ್ಯೋಗ ಮತ್ತು ತರಬೇತಿ;

(iv) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಖಾದಿ ಮತ್ತು ಗ್ರಾಮೋದ್ಯೋಗ;

(v) ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಥವಾ ಆತನ ನಾಮನಿರ್ದೇಶಿತರು;

(vi) ವ್ಯವಸ್ಥಾಪಕ ನಿರ್ದೇಶಕರು, ರಾಜೀವ್‌ಗಾಂಧಿ ವಸತಿ ನಿಗಮ;

(vii) ಆಯುಕ್ತರು, ಕೈಗಾರಿಕಾ ಅಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ;

(viii) ನಿರ್ದೇಶಕರು, ಮಹಿಳೆ ಮತ್ತು ಮಕ್ಕಳ ಕಲ್ಯಾಣ;

(ix) ನಿರ್ದೇಶಕರು, ಪಶುಸಂಗೋಪನೆ;

(x) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉಗ್ರಾಣ ನಿಗಮ;

(xi) ನಿರ್ದೇಶಕರು, ಮಾರುಕಟ್ಟೆ.

(3) ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ವಿಸ್ತರಣಾ ಚಟುವಟಿಕೆಗಳು, ಕೌಶಲ್ಯಗಳು ಮತ್ತು ಉದ್ಯಮಮಶೀಲತಾ ಅಭಿವೃದ್ಧಿಯ ನಿರ್ದೇಶನಾಲಯದ ಎಲ್ಲಾ ಸದಸ್ಯರ ಪದಾವಧಿಯು ಮೂರು ವರ್ಷಗಳಾಗಿರತಕ್ಕದ್ದು.

(4) ಕಾಲಕಾಲಕ್ಕೆ ರಚಿಸಲಾಗುವ ವಿನಿಯಮಗಳಲ್ಲಿ ಹೇಳಿರುವಂತೆ ಸಭೆಗಳ ಕಾರ್ಯವಿಧಾನವು ಇರತಕ್ಕದ್ದು;

**44. ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆ ಕೇಂದ್ರದ ಪ್ರಕಾರ್ಯಗಳು.–** (1) ಎಲ್ಲಾ ಬಗೆಯ ತರಬೇತಿ ಮತ್ತು ಪ್ರಕಟಣೆಯನ್ನು ಉತ್ತೇಜಿಸುವುದು, ಅಭಿವೃದ್ಧಿಪಡಿಸುವುದು ಮತ್ತು ಉತ್ತೇಜಿಸುವುದು.

(2) ಎಲ್ಲಾ ಬಗೆಯ ಪಂಚಾಯತ್ ಸದಸ್ಯರು ಮತ್ತು ಅಧಿಕಾರಗಳಿಗೆ ತರಬೇತಿ ನೀಡುವುದು.

(3) ಅಭಿವೃದ್ಧಿ ವಿಷಯಗಳ ಕುರಿತು ವಿಚಾರ ಸಂಕಿರಣಗಳನ್ನು ಆಯೋಜಿಸುವುದು ಮತ್ತು ಕಿರು ಹೊತ್ತಿಗೆಗಳು, ಪುಸ್ತಕಗಳು, ನಿಯತಕಾಲಿಕೆಗಳು ಹಾಗೂ ಪಠ್ಯಪುಸ್ತಕಗಳನ್ನು ಪ್ರಕಟಿಸುವುದು.

(4) ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿಗೆ ಸಂಬಂಧಿಸಿದಂತೆ ಅಧ್ಯಯನ ಮತ್ತು ತರಬೇತಿಗಳಿಗೆ ಉತ್ತೇಜನ ನೀಡುವುದು.

(5) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್‌ಗೆ ಸಂಬಂಧಿಸಿದಂತೆ ಅಧ್ಯಯನ, ತರಬೇತಿಗಳನ್ನು ನೀಡಲು ಮತ್ತು ಪುಸ್ತಕಗಳನ್ನು ಪ್ರಕಟಿಸಲು ಉತ್ತೇಜನ ನೀಡುವುದು.

(6) ಪರಿಸರ, ವಿಜ್ಞಾನ ಮತ್ತು ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯ ವ್ಯವಸ್ಥಾಪನೆಗೆ ಸಂಬಂಧಿಸಿದ ಅಧ್ಯಯನಕ್ಕೆ ಉತ್ತೇಜನ ನೀಡುವುದು;

(7) ಸಾಮಾಜಿಕ ವಿಜ್ಞಾನ ಮತ್ತು ಗ್ರಾಮೀಣ ಪುನಾರಚನೆಗೆ ಸಂಬಂಧಿಸಿದ ಅಧ್ಯಯನಕ್ಕೆ ಉತ್ತೇಜನ ನೀಡುವುದು;

(8) ಕೃಷಿ ವ್ಯವಹಾರ ವ್ಯವಸ್ಥಾಪನೆ ಮತ್ತು ಗ್ರಾಮೀಣಾಭಿವೃದ್ಧಿ ವ್ಯವಸ್ಥಾಪನೆಗೆ ಸಂಬಂಧಿಸಿದ ಅಧ್ಯಯನಕ್ಕೆ ಉತ್ತೇಜನ ನೀಡುವುದು;

**45. ಕೃಷಿ ವ್ಯವಹಾರ ವ್ಯವಸ್ಥಾಪನೆ ಮತ್ತು ಗ್ರಾಮೀಣಾಭಿವೃದ್ಧಿ ವ್ಯವಸ್ಥಾಪನಾ ಶಾಲೆ.–** ಈ ಮುಂದಿನ ಸದಸ್ಯರನ್ನು ಒಳಗೊಂಡ ಕೃಷಿ ವ್ಯವಹಾರ ವ್ಯವಸ್ಥಾಪನೆ ಮತ್ತು ಗ್ರಾಮೀಣಾಭಿವೃದ್ಧಿ ವ್ಯವಸ್ಥಾಪನಾ ಶಾಲೆಯು ಇರತಕ್ಕದ್ದು, ಎಂದರೆ:–

(1) ವಿಶ್ವವಿದ್ಯಾಲಯದ ಕುಲಪತಿಗಳು –ಅಧ್ಯಕ್ಷರು;

(2) ಕುಲಪತಿಗಳು – ತೋಟಗಾರಿಕಾ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ;

(3) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆಯ ನಿರ್ದೇಶಕರು;

(4) ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ;

(5) ಆಯುಕ್ತರು, ಕೃಷಿ ಇಲಾಖೆ, ಕರ್ನಾಟಕ ಸರ್ಕಾರ;

(6) ನಿರ್ದೇಶಕರು, ಮಾರುಕಟ್ಟೆ, ಕರ್ನಾಟಕ ಸರ್ಕಾರ;

(7) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ;

(8) ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿಕಾಸ ಗ್ರಾಮೀಣ ಬ್ಯಾಂಕ್, ಧಾರವಾಡ;

(9) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್, ಬೆಂಗಳೂರು;

(10) ನಿರ್ದೇಶಕರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ;

(11) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕೃಷಿ ಉತ್ಪನ್ನಗಳ ರಫ್ತು ನಿಗಮ.

(12) ಕೃಷಿ ವ್ಯವಹಾರ ವ್ಯವಸ್ಥಾಪನೆ ಮತ್ತು ಗ್ರಾಮೀಣಾಭಿವೃದ್ಧಿ ವ್ಯವಸ್ಥಾಪನಾ ಶಾಲೆಯ ಮುಖ್ಯಸ್ಥರು – ಸದಸ್ಯ–ಕಾರ್ಯದರ್ಶಿ;

**46. ಕೃಷಿ ವ್ಯವಹಾರ ವ್ಯವಸ್ಥಾಪನೆ ಮತ್ತು ಗ್ರಾಮೀಣಾಭಿವೃದ್ಧಿ ವ್ಯವಸ್ಥಾಪನಾ ಶಾಲೆಯ ಪ್ರಕಾರ್ಯಗಳು.–** ಕೃಷಿ ವ್ಯವಹಾರ ವ್ಯವಸ್ಥಾಪನೆ ಮತ್ತು ಗ್ರಾಮೀಣಾಭಿವೃದ್ಧಿ ವ್ಯವಸ್ಥಾಪನಾ ಶಾಲೆಯ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(i) ರೈತರಿಗೆ ಆಹಾರ ಭದ್ರತೆ ಮತ್ತು ಆದಾಯ ಭದ್ರತೆಗಾಗಿ ಬೆಳೆ ಉತ್ಪಾದನೆಯ ಕಾರ್ಯತಂತ್ರಗಳಲ್ಲಿ ಅಧ್ಯಯನ ಮತ್ತು ಸಂಶೋಧನೆಗೆ ಉತ್ತೇಜನ ನೀಡುವುದು.

(ii) ಅಂತರ್ಗತ ಮಾರುಕಟ್ಟೆ ವ್ಯವಸ್ಥೆ ಮತ್ತು ಸರಬರಾಜು ಸರಪಣಿ ವ್ಯವಸ್ಥಾಪನೆ, ದಾಸ್ತಾನು ಹಾಗೂ ಸಕಲ ಹಿಮ್ಮುಖ ಮತ್ತು ಮುಮ್ಮುಖ ಸಂಬಂಧಗಳನ್ನು (backward and forward linkages) ಅಭಿವೃದ್ಧಿ ಪಡಿಸುವುದು.

(iii) ಕೃಷಿ ಮತ್ತು ಕೃಷಿಯೇತರ ವಲಯಗಳ ಆದಾಯವನ್ನು ಉತ್ತೇಜಿಸಲು ಕೃಷಿ ವ್ಯವಹಾರ ಮತ್ತು ಗ್ರಾಮೀಣಾಭಿವೃದ್ಧಿ ಯೋಜನೆಗಳ ನಡುವೆ ಪರಿಣಾಮಕಾರಿ ಸಮನ್ವಯ ಸಾಧಿಸಲು ಕಾರ್ಯತಂತ್ರಗಳನ್ನು ಮತ್ತು ಯೋಜನೆಗಳನ್ನು ಅಭಿವೃದ್ಧಿಪಡಿಸುವುದು.

(iv) ಮಾರುಕಟ್ಟೆಗಳ ಮತ್ತು ದರಗಳ ಅಪಾಯ ಸಾಧ್ಯತೆಗಳಿಂದ ಮತ್ತು ಅನಿಶ್ಚಿತತೆಗಳಿಂದ ರೈತರನ್ನು ರಕ್ಷಿಸಿ ಅವರ ನೇರ ಭಾಗವಹಿಸುವಿಕೆಯೊಂದಿಗೆ ಕೃಷಿ ಮತ್ತು ಕೃಷಿ ವ್ಯವಹಾರ ಉದ್ಯಮಗಳನ್ನು ಬೆಂಬಲಿಸಲು ಬ್ಯಾಂಕುಗಳು ಮತ್ತು ಸಹಕಾರಿ ಸಂಸ್ಥೆಗಳಿಂದ ಹಣಕಾಸು, ಸಾಲ ಮತ್ತು ಬೆಳೆ ವಿಮೆಯನ್ನು ಖಚಿತಪಡಿಸುವುದು.

(v) ಉತ್ಪಾದಕತೆ ಮತ್ತು ಕೃಷಿ ವ್ಯವಹಾರದ ಲಾಭದಾಯಕತೆಯನ್ನು ಪ್ರೋತ್ಸಾಹಿಸಲು ಸರ್ಕಾರಕ್ಕೆ ಗ್ರಾಮೀಣಾಭಿವೃದ್ಧಿ ಮತ್ತು ಕೃಷಿ, ತೋಟಗಾರಿಕೆ ಹಾಗೂ ಪೂರಕ ವ್ಯವಹಾರಗಳ ಬಗೆಗೆ ಸಮುಚಿತ ನೀತಿಗಳನ್ನು ಸೂಚಿಸುವುದು.

(vi) ಮಾನವ ಪೌಷ್ಟಿಕತೆ ಕುರಿತು ಒತ್ತು ನೀಡುವ ಜೊತೆಗೆ ಸಮಗ್ರ ಕೃಷಿ ವ್ಯವಸ್ಥೆಯನ್ನು ಉತ್ತೇಜಿಸುವುದು ಮತ್ತು ಅಭಿವೃದ್ಧಿಪಡಿಸುವುದು.

(vii) ಕೃಷಿ ವ್ಯವಹಾರದಲ್ಲಿ ಮಾರುಕಟ್ಟೆ ಅಧ್ಯಯನ ಮತ್ತು ಸಂಶೋಧನೆಯನ್ನು ಕೈಗೊಳ್ಳುವುದು ಹಾಗೂ ವಿವಿಧ ಹಣ್ಣುಗಳು, ತರಕಾರಿ ಬೆಳೆಗಳು ಹಾಗೂ ಇತರ ಕೃಷಿ ಉತ್ಪನ್ನಗಳಿಗಾಗಿ ಪ್ರತಿ ವರ್ಷ ಋತುವಿನಿಂದ ಋತುವಿಗೆ ವಿಸ್ತರಣಾ ಸೇವೆಗಳ ಮೂಲಕ ರೈತರಿಗೆ ಮಾಹಿತಿಗಳನ್ನು ಒದಗಿಸುವುದು.

(viii) ಕೃಷಿಕರನ್ನು ವ್ಯವಹಾರಸ್ಥರನ್ನಾಗಿ ಭಾಗಿಯಾಗಿಸಿ ಕೃಷಿ ವ್ಯವಹಾರದ ಮುಖಾಂತರ ಕಾರ್ಯತಂತ್ರಗಳನ್ನು ಮತ್ತು ಯೋಜನೆಗಳನ್ನು ಅಭಿವೃದ್ಧಿಪಡಿಸುವುದು. ಇದರಿಂದ ಕೃಷಿಯ ಅಸ್ಥಿರತೆಯು ಕಡಿಮೆಯಾಗುವುದು ಮತ್ತು ಕೃಷಿ ಕಾರ್ಯಾಚರಣೆಯು ಆರ್ಥಿಕವಾಗಿ ಕಾರ್ಯಸಾಧ್ಯವಾಗುವುದು. ಮಿಶ್ರ ಆಹಾರ ಬೆಳೆಗಳು ಮತ್ತು ನಗದು ಬೆಳೆಗಳು ರೈತರ ಕೈಗೆ ಹೆಚ್ಚು ಆದಾಯವನ್ನು ತಂದುಕೊಡುವುದು.

(ix) ಕೃಷಿ ವ್ಯವಹಾರ ಪ್ರವೃತ್ತವಾಗಿರುವ ರಫ್ತನ್ನು ಉತ್ತೇಜಿಸುವುದು. ವಿಶೇಷವಾಗಿ ಜೈವಿಕ ಗೊಬ್ಬರವನ್ನು ಬಳಸಿ ಬೆಳೆದಿರುವ ಭಾರತದ ಹಣ್ಣು, ಆಹಾರ ಮತ್ತು ಔಷಧಿಯ ಸುಗಂಧ ಮೂಲಿಕೆಗಳಿಗೆ ಬೇಡಿಕೆಯಿರುವುದು. ವಿಶ್ವವಿದ್ಯಾನಿಲಯವು ಈ ರಫ್ತು ಸಾಮರ್ಥ್ಯದ ಪ್ರಯೋಜನವನ್ನು ಪಡೆಯುವುದು ಮತ್ತು ಆಧುನಿಕ ವ್ಯಾಪಾರ ಅವಕಾಶಗಳ ಅನುಕೂಲತೆಗಳನ್ನು ಪಡೆದುಕೊಳ್ಳುವುದು.

(x) ಲಾಭದಾಯಕತೆ ಮತ್ತು ಪರಿಣಾಮಕಾರಿ ವಿಸ್ತರಣಾ ಸೇವೆಗಳನ್ನು ಉತ್ತಮಪಡಿಸಲು ಕೃಷಿ ಕ್ರಮೋಪಾಯಗಳಿಗಾಗಿ ಅಪಾಯ ಸಾಧ್ಯತಾ ನಿರ್ವಹಣಾ ಕಾರ್ಯತಂತ್ರಗಳ ಮುಖಾಂತರ ಗ್ರಾಮೀಣ ರೈತರನ್ನು ಮತ್ತು ಕೃಷಿ ಕಾರ್ಮಿಕರನ್ನು ಸಬಲೀಕರಿಸುವುದು.

(xi) ಆಹಾರ ಸಂರಕ್ಷಣೆ, ಕೃಷಿ ಉತ್ಪನ್ನಗಳನ್ನು ಪ್ಯಾಕ್ ಮಾಡುವುದು, ಶ್ರೇಣೀಕರಣ ಮಾಡುವುದು ಮತ್ತು ಅಂತರ್‌ರಾಷ್ಟ್ರೀಯ ಮಾನದಂಡಗಳಿಗೆ ಅನುಗುಣವಾಗಿ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸುವುದಕ್ಕಾಗಿ ನಾವಿನ್ಯತಾ ತಂತ್ರಜ್ಞಾನಗಳಿಗಾಗಿ ಕಾರ್ಯನಿರ್ವಹಿಸುವುದು.

(xii) ವಿಶೇಷ ಕೃಷಿ ವ್ಯವಹಾರ ಮಾದರಿಗಳನ್ನು ವಿಕಾಸಗೊಳಿಸಲು ಮುಖ್ಯ ವ್ಯವಸ್ಥಾಪನಾ ವಿಧಾನಗಳ ಸಮರ್ಪಕ ಸಂಯೋಜನೆಯೊಂದಿಗೆ ವ್ಯವಹಾರ ಸ್ನೇಹಿ ಪಠ್ಯಕ್ರಮಗಳನ್ನು ಅಭಿವೃದ್ಧಿಪಡಿಸುವುದು ಮತ್ತು ವಿನ್ಯಾಸಗೊಳಿಸುವುದು.

(xiii) ವ್ಯಾಪಾರ ಸಮಾವೇಶಗಳು, ಕೃಷಿ ಮೇಳಗಳು, ಕೃಷಿ ಯೋಜನೆಗಳು ಮುಂತಾದವುಗಳಂಥ ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ವಿದ್ಯಾರ್ಥಿಗಳು ಪಾಲ್ಗೊಳ್ಳುವುದನ್ನು ಖಚಿತಪಡಿಸುವುದು.

**47. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಶಾಲೆ.–** (1) ಈ ಮುಂದಿನ ಸದಸ್ಯರನ್ನೊಳಗೊಂಡ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಶಾಲೆಯು ಇರತಕ್ಕದ್ದು, ಎಂದರೆ:–

(i) ಕುಲಪತಿಗಳು – ಅಧ್ಯಕ್ಷರು;

(ii) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆಯ ನಿರ್ದೇಶಕರು;

(iii) ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ;

(iv) ಮುಖ್ಯಸ್ಥರು, ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿ ಶಾಲೆ;

(v) ನಿರ್ದೇಶಕರು, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ;

(vi) ಕುಲಪತಿಗಳು ನಾಮ ನಿರ್ದೇಶನ ಮಾಡಿದ ಸ್ಥಳೀಯ ಸ್ವಯಂ ಆಡಳಿತವನ್ನು ಬಲಪಡಿಸುವಲ್ಲಿ ಗಮನಾರ್ಹ ಸಾಧನೆ ಮಾಡಿರುವ ಜಿಲ್ಲಾ ಪಂಚಾಯಿತಿಗಳ ಇಬ್ಬರು ಅಧ್ಯಕ್ಷರು;

(vii) ಕುಲಪತಿಗಳು ನಾಮ ನಿರ್ದೇಶನ ಮಾಡಿದ ಸ್ಥಳೀಯ ಸ್ವಯಂ ಆಡಳಿತವನ್ನು ಬಲಪಡಿಸುವಲ್ಲಿ ಗಮನಾರ್ಹ ಸಾಧನೆ ಮಾಡಿರುವ ಗ್ರಾಮ ಪಂಚಾಯಿತಿಗಳ ಇಬ್ಬರು ಅಧ್ಯಕ್ಷರು;

(viii) ಕುಲಪತಿಗಳು ನಾಮ ನಿರ್ದೇಶನ ಮಾಡಿದ ಸ್ಥಳೀಯ ಸ್ವಯಂ ಆಡಳಿತವನ್ನು ಬಲಪಡಿಸುವಲ್ಲಿ ಗಮನಾರ್ಹ ಸಾಧನೆ ಮಾಡಿರುವ ಜಿಲ್ಲಾ ಪಂಚಾಯಿತಿಗಳ ಇಬ್ಬರು ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು;

(ix) ಕುಲಪತಿಗಳು ನಾಮ ನಿರ್ದೇಶನ ಮಾಡಿದ ಪಂಚಾಯತ್ ರಾಜ್ ಸಂಸ್ಥೆಗಳೊಂದಿಗೆ ಹತ್ತಿರವಾಗಿ ಕಾರ್ಯನಿರತರಾಗಿರುವ ಸರ್ಕಾರೇತರ ಸಂಸ್ಥೆಯ ಒಬ್ಬ ಪ್ರತಿನಿಧಿ;

(x) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಶಾಲೆಯ ಮುಖ್ಯಸ್ಥರು – ಸದಸ್ಯ–ಕಾರ್ಯದರ್ಶಿ.

(2) ಪದನಿಮಿತ್ತ ಸದಸ್ಯರುಗಳನ್ನು ಹೊರತುಪಡಿಸಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಶಾಲೆಯ ಎಲ್ಲಾ ಸದಸ್ಯರುಗಳ ಪದಾವಧಿಯು ಮೂರು ವರ್ಷಗಳಾಗಿರತಕ್ಕದ್ದು;

(3) ಕಾಲಕಾಲಕ್ಕೆ ವಿನಿಯಮಗಳಲ್ಲಿ, ಹೇಳಿರುವಂತೆ ಸಭೆಗಳ ಕಾರ್ಯವಿಧಾನಗಳು ಇರತಕ್ಕದ್ದು.

**48. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಶಾಲೆಯ ಪ್ರಕಾರ್ಯಗಳು.–** ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಶಾಲೆಯ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(i) ಪಂಚಾಯತ್ ರಾಜ್‌ನ ಭಾಗವಹಿಸುವಿಕೆ, ಬಲಪಡಿಸುವಿಕೆ, ವಿಕೇಂದ್ರೀಕರಣ, ಅಭಿವೃದ್ಧಿ ಚಟುವಟಿಕೆ ಇತ್ಯಾದಿಗಳನ್ನು ಅಧಿಕಗೊಳಿಸುವ ಕ್ಷೇತ್ರದಲ್ಲಿನ ಅಧ್ಯಯನ ಮತ್ತು ಸಂಶೋಧನೆಯನ್ನು ಪ್ರವರ್ತಿಸುವುದು.

(ii) ಪಂಚಾಯತ್ ರಾಜ್ ಸಂಸ್ಥೆಗಳ ಜನ ಪ್ರತಿನಿಧಿಗಳಿಗೆ, ಸರ್ಕಾರಿ ಅಧಿಕಾರಿಗಳಿಗೆ, ಸರ್ಕಾರೇತರ ಸಂಸ್ಥೆಗಳಿಗೆ ಮುಂತಾದವರಿಗೆ ಅಭಿವಿನ್ಯಾಸ / ಪುನಶ್ಚೇತನ ಕಾರ್ಯಕ್ರಮಗಳನ್ನು ಸಂಘಟಿಸಲು ಸಮುಚಿತ ಪ್ರಾಧಿಕಾರಗಳಿಗೆ ಪ್ರಸ್ತಾವನೆಗಳನ್ನು ಸಲ್ಲಿಸುವುದು.

(iii) ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಂಬಂಧಿಸಿದ ಸಂವಿಧಾನಿಕ ಉಪಬಂಧಗಳಿಗೆ ಮತ್ತು ಸಂಬಂಧಿತ ಕಾನೂನುಗಳ ಅನುಷ್ಠಾದಲ್ಲಿನ ಅಡ್ಡಿ – ಆತಂಕಗಳ (bottlenecks) ಬಗೆಗೆ ಅಧ್ಯಯನ ಮಾಡುವುದು ಮತ್ತು ಸುಧಾರಣೆಗಳನ್ನು ಸೂಚಿಸುವುದು.

(iv) ಸ್ತ್ರೀಯರ, ದುರ್ಬಲ ವರ್ಗದವರ ಮತ್ತು ಭಾಗವಹಿಸುವಿಕೆಯನ್ನು ಖಚಿತಪಡಿಸಲು ಕಾರ್ಯತಂತ್ರಗಳನ್ನು ರೂಪಿಸುವುದು.

(v) ಪಂಚಾಯತ್ ರಾಜ್ ಸಂಸ್ಥೆಗಳ ಉತ್ತಮ ಆಚರಣೆಗಳನ್ನು ರೂಪಿಸುವುದು ಮತ್ತು ಪ್ರಕಟಣೆ ಮತ್ತು ಸಂಪರ್ಕ ಸಂವಹನ ಮಾಧ್ಯಮಗಳ ಮುಖಾಂತರ ಅವನ್ನು ಪ್ರಚುರಪಡಿಸಲು ಏರ್ಪಾಡು ಮಾಡುವುದು.

(vi) ಸಂಪರ್ಕ–ಸಂವಹನಾಭಿವೃದ್ಧಿ ಅಧ್ಯಯನ ಮಾಡುವುದು.

**49. ಪರಿಸರ ವಿಜ್ಞಾನ ಮತ್ತು ಸಾರ್ವಜನಿಕ ಆರೋಗ್ಯ ಹಾಗೂ ನೈರ್ಮಲ್ಯ ವ್ಯವಸ್ಥಾಪನಾ ಶಾಲೆ.–** ಈ ಮುಂದಿನ ಸದಸ್ಯರನ್ನು ಒಳಗೊಂಡ ಪರಿಸರ ವಿಜ್ಞಾನ ಮತ್ತು ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯ ವ್ಯವಸ್ಥಾಪನಾ ಶಾಲೆಯು ಇರತಕ್ಕದ್ದು, ಎಂದರೆ:–

(1) ಕುಲಪತಿಗಳು – ಅಧ್ಯಕ್ಷರು;

(2) ನಿರ್ದೇಶಕರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯ;

(3) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆಯ ನಿರ್ದೇಶಕರು;

(4) ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ;

(5) ನಿರ್ದೇಶಕರು, ಜಲಾನಯನ ಕಾರ್ಯಕ್ರಮ;

(6) ನಿರ್ದೇಶಕರು, ಕೃಷಿ, ಬೆಂಗಳೂರು;

(7) ಸ್ಥಳೀಯ ಕ್ಷೇತ್ರವ್ಯಾಪ್ತಿಯ ಅರಣ್ಯ ಸಂರಕ್ಷಣಾಧಿಕಾರಿ;

(8) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್‌ನಲ್ಲಿನ ಕುಡಿಯುವ ನೀರು ಸರಬರಾಜು ಮತ್ತು ನೈರ್ಮಲ್ಯತೆಯ ಪ್ರಭಾರ ಹೊಂದಿರುವ ಮುಖ್ಯ ಎಂಜಿನಿಯರ್;

(9) ಆಯುಕ್ತರು, ಆರೋಗ್ಯ ಇಲಾಖೆ;

(10) ನಿರ್ವಾಹಣಾಧಿಕಾರಿ, ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು;

(11) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ;

(12) ಸರ್ಕಾರದಿಂದ ನಾಮ ನಿರ್ದೇಶಿತರಾದ ಜಿಲ್ಲಾ ಪಂಚಾಯತ್‌ನ ಇಬ್ಬರು ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು;

(13) ಸರ್ಕಾರದಿಂದ ನಾಮ ನಿರ್ದೇಶಿತರಾದ ಇಬ್ಬರು ಹೆಸರಾಂತ ಪರಿಸರ ತಜ್ಞರು;

(14) ಸರ್ಕಾರದಿಂದ ನಾಮ ನಿರ್ದೇಶಿತರಾದ ಸರ್ಕಾರೇತರ ಸಂಸ್ಥೆಯ ಒಬ್ಬ ಪ್ರತಿನಿಧಿ;

(15) ಗ್ರಾಮೀಣ ಇಂಧನ ಕಾರ್ಯಕ್ರಮದ ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಜಂಟಿ / ಉಪ ಕಾರ್ಯದರ್ಶಿ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ;

(16) ಪರಿಸರ ವಿಜ್ಞಾನ ಮತ್ತು ಸಾರ್ವಜನಿಕ ಆರೋಗ್ಯ ಹಾಗೂ ನೈರ್ಮಲ್ಯ ವ್ಯವಸ್ಥಾಪನಾ ಶಾಲೆಯ ಮುಖ್ಯಸ್ಥರು – ಸದಸ್ಯ–ಕಾರ್ಯದರ್ಶಿ.

**50. ಪರಿಸರ ವಿಜ್ಞಾನ ಮತ್ತು ಸಾರ್ವಜನಿಕ ಆರೋಗ್ಯ ಹಾಗೂ ನೈರ್ಮಲ್ಯ ವ್ಯವಸ್ಥಾಪನಾ ಶಾಲೆಯ ಪ್ರಕಾರ್ಯಗಳು.–** ಪರಿಸರ ವಿಜ್ಞಾನ ಮತ್ತು ಸಾರ್ವಜನಿಕ ಆರೋಗ್ಯ ಹಾಗೂ ನೈರ್ಮಲ್ಯ ವ್ಯವಸ್ಥಾಪನಾ ಶಾಲೆಯ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(1) ಪರಿಸರ ಸಮಸ್ಯೆಗಳು ಮತ್ತು ಮಾನವನ ಆರೋಗ್ಯ, ಕೃಷಿ ಉತ್ಪಾದನೆ, ಜಲಮಾಲಿನ್ಯ, ನೀರಿನ ಕೊರತೆ, ವಾಯು ಮಾಲಿನ್ಯ, ಮಣ್ಣಿನ ಸವೆತ, ಅರಣ್ಯ ನಾಶ, ಜೈವಿಕ ವೈವಿಧ್ಯತೆ ನಷ್ಟ, ಹವಾಮಾನ ಬದಲಾವಣೆ ಮುಂತಾದವುಗಳ ಮೇಲೆ ಅವುಗಳ ಪರಿಣಾಮವನ್ನು ಕುರಿತು ಅಧ್ಯಯನ ಮಾಡುವುದು.

(2) ಬರ, ಪ್ರವಾಹ, ಭೂಕಂಪ, ಕಾಲ್ಗಿಚ್ಚು ಮುಂತಾದವುಗಳಂಥ ಪ್ರಕೃತಿಕ ವಿಕೋಪಗಳ ವಿರುದ್ಧ ವಿಪತ್ತು ನಿರ್ವಹಣೆ, ಪುನಃಸ್ಥಾಪನೆ ಮತ್ತು ಪುನರ್ವಸತಿ ಪರಿಹಾರ ಕಾರ್ಯತಂತ್ರಗಳನ್ನು ರೂಪಿಸುವುದು.

(3) ಪರಿಸರ ವ್ಯವಸ್ಥೆಯನ್ನು ಸಂರಕ್ಷಿಸಲು ಇಂಧನ ಉಳಿತಾಯ, ಇಂಧನ ಕಾರ್ಯಕ್ಷಮತೆ ಮತ್ತು ಸಂಪ್ರದಾಯಿಕವಲ್ಲದ ಇಂಧನ ಬಳಕೆ, ಸೌರಶಕ್ತಿ ಮತ್ತು ವಾಯು ಇಂಧನ, ಜೈವಿಕ ರಾಶಿ, ಜೈವಿಕ ಅನಿಲ, ಗೋಬರ್ ಅನಿಲ ಬಳಕೆಯಂಥ ವಿವಿಧ ವಿಧಾನಗಳನ್ನು ಅಳವಡಿಸಿಕೊಳ್ಳಲು ಜನರನ್ನು ಉತ್ತೇಜಿಸುವುದು.

(4) ಜಲಾನಯನ ನಿರ್ವಹಣೆ, ಜಲಸಂಪನ್ಮೂಲಗಳ ಸರಬರಾಜು ಮತ್ತು ಸಂರಕ್ಷಣೆ, ಸರೋವರ, ತೊರೆ ಮತ್ತು ನದಿಗಳ ಸಂರಕ್ಷಣೆ ಮತ್ತು ಅಭಿವೃದ್ಧಿಯ ತಾಂತ್ರಿಕತೆಗಳನ್ನು ವಿಕಾಸಗೊಳಿಸುವುದು.

(5) ಪರಿಸರ ಹಾನಿ ಮತ್ತು ಗ್ರಾಮೀಣ ಪ್ರದೇಶದಲ್ಲಿನ ಬಡತನದ ನಡುವೆ ಇರುವ ಸಂಬಂಧಕ್ಕೆ ಒತ್ತು ನೀಡಿ ಸುಸ್ಥಿರ ಅಭಿವೃದ್ಧಿಯ ಪರಿಕಲ್ಪನೆಯನ್ನು ಜನಪ್ರಿಯಗೊಳಿಸುವುದು.

(6) ಜನಸಂಖ್ಯಾ ಬೆಳವಣಿಗೆ, ಬಡತನ, ಉತ್ಪಾದಕತೆಯ ನಷ್ಟ ಮತ್ತು ಪರಿಸರ ನಾಶದ ನಡುವಿನ ಆಂತರಿಕ ಸಂಬಂಧವನ್ನು ಅಧ್ಯಯನ ಮಾಡುವುದು. ಗ್ರಾಮೀಣ ಪ್ರದೇಶದಲ್ಲಿನ ಸುಸ್ಥಿರ ಬೆಳವಣಿಗೆ ಮತ್ತು ಅರ್ಥಿಕಾಭಿವೃದ್ಧಿ ನಡುವಿನ ಆಂತರಿಕ ಸಂಧವನ್ನು ಪರಸ್ಪರ ಬಲಪಡಿಸುವುದು.

(7) ಗ್ರಾಮೀಣ ಪ್ರದೇಶದಲ್ಲಿ ನಿರ್ಮಲ ಪರಿಸರ ಪರಿಕಲ್ಪನೆ ಮತ್ತು ಸಮುದಾಯಿಕ ಆರೋಗ್ಯ ಮತ್ತು ನೈರ್ಮಲ್ಯ ನಿರ್ವಹಣೆ ವಿಷಯಗಳನ್ನು ಅಧ್ಯಯನ ಮಾಡುವುದು.

(8) ಹೆಚ್ಚು ಸಕ್ಷಮ ರೀತಿಯಲ್ಲಿ ನಮ್ಮ ಜಲ ಸಂಪನ್ಮೂಲಗಳನ್ನು ನಾವಿನ್ಯತಾ ತಂತ್ರಜ್ಞಾನಗಳನ್ನು ರೂಪಿಸುವುದು. ಅರೆ ಬಂಜರಾದ ಮಳೆನೀರು ಆಧಾರಿತ ಕೃಷಿ ಪ್ರದೇಶಕ್ಕಾಗಿ, ವಿಶೇಷವಾಗಿ ಸ್ಥಳೀಯವಾಗಿ ತಯಾರಿಸಿರುವ, ಯುಕ್ತ ಸಾಧನಗಳನ್ನು ಬಳಸಿ ಕಿರು ನೀರಾವರಿ ತಂತ್ರಜ್ಞಾನವನ್ನು ರೂಪಿಸುವುದು. ನೀರಾವರಿ ಪ್ರದೇಶದಲ್ಲಿಯೂ ಸಂಯೋಜಿತ ನೀರು ಬಳಕೆ ವಿಧಾನಗಳಿಗೆ ಪ್ರೋತ್ಸಾಹ ನೀಡುವುದು.

(9) ಗ್ರಾಮೀಣ ಪ್ರದೇಶದಲ್ಲಿ ಬಡತನ ನಿರ್ಮೂಲನೆಗೆ ಪ್ರಮುಖವಾಗಿರುವತಂಹ ಪ್ರಾಕೃತಿಕ ಸಂಪನ್ಮೂಲಗಳ ನಿರ್ವಹಣೆ ಮತ್ತು ಸುಸ್ಥಿರ ಅಭಿವೃದ್ದಿಯಲ್ಲಿ ಅಡಕವಾಗಿರುವ ವಿವಿಧ ವಿಷಯಗಳನ್ನು ಅಧ್ಯಯನ ಮಾಡುವುದು.

**51. ಸಾಮಾಜಿಕ ವಿಜ್ಞಾನ ಮತ್ತು ಗ್ರಾಮೀಣ ಪುನಾರಚನಾ ಶಾಲೆ.–** ಈ ಮುಂದಿನ ಸದಸ್ಯರುಗಳನ್ನು ಒಳಗೊಂಡ ಸಾಮಾಜಿಕ ವಿಜ್ಞಾನ ಮತ್ತು ಗ್ರಾಮೀಣ ಪುನಾರಚನಾ ಶಾಲೆಯು ಇರತಕ್ಕದ್ದು, ಎಂದರೆ:–

(1) ಕುಲಪತಿಗಳು – ಅಧ್ಯಕ್ಷರು;

(2) ನಿರ್ದೇಶಕರು – ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯ

(3) ಎಲ್ಲಾ ಶಾಲೆಗಳ ತರಬೇತಿ, ಪ್ರಕಟಣೆ ಮತ್ತು ಮೇಲ್ವಿಚಾರಣೆಯ ನಿರ್ದೇಶಕರು

(4) ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ;

(5) ನಿರ್ದೇಶಕರು, ಪಂಚಾಯತ್ ರಾಜ್, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ;

(6) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ;

(7) ನಿರ್ದೇಶಕರು, ಬುಡಕಟ್ಟು ಕಲ್ಯಾಣ ಇಲಾಖೆ;

(8) ವ್ಯವಸ್ಥಾಪಕ ನಿರ್ದೇಶಕರು, ಅಲ್ಪಸಂಖ್ಯಾತರುಗಳ ಅಭಿವೃದ್ಧಿ ನಿಗಮ;

(9) ಕುಲಪತಿಗಳು ನಾಮನಿರ್ದೇಶಿಸಿದ ಸಾಮಾಜಿಕ ಸಮೂಹಗಳೊಂದಿಗೆ ಸಾಮಿಪ್ಯವಾಗಿ ಕಾರ್ಯನಿರತವಾಗಿರುವ ಸರ್ಕಾರೇತರ ಸಂಸ್ಥೆಗಳಿಂದ ಒಬ್ಬ ಪ್ರತಿನಿಧಿ;

(10) ಸರ್ಕಾರದಿಂದ ನಾಮನಿರ್ದೇಶಿತರಾದ ಜಿಲ್ಲಾ ಪಂಚಾಯತಿಗಳ ಇಬ್ಬರು ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು;

(11) ಸಾಮಾಜಿಕ ಕಾರ್ಯಗಳಲ್ಲಿ ಗಮನಾರ್ಹ ಸೇವೆ ಸಲ್ಲಿಸಿದ ಜಿಲ್ಲಾ ಪಂಚಾಯಿತಿಗಳ ಇಬ್ಬರು ಅಧ್ಯಕ್ಷರು, ಅವರ ಪೈಕಿ ಒಬ್ಬರು ಪರಿಶಿಷ್ಟ ಜಾತಿ ಮತ್ತು ಒಬ್ಬರು ಪರಿಶಿಷ್ಟ ಪಂಗಡಗಳಿಗೆ ಸೇರಿದವರಾಗಿರತಕ್ಕದ್ದು;

(12) ಸರ್ಕಾರದಿಂದ ನಾಮನಿರ್ದೇಶಿತರಾದ ಸ್ವಸಹಾಯಗುಂಪುಗಳಿಂದ [ಎಸ್.ಹೆಚ್.ಜಿ] ಒಬ್ಬ ಮಹಿಳಾ ಸದಸ್ಯರು. ಅವರು ಉತ್ತಮ ಸಾಮಾಜಿಕ ಕಾರ್ಯ ಮತ್ತು ಸ್ತ್ರೀಯರ ಆರ್ಥಿಕ ಸಬಲೀಕರಣಕ್ಕಾಗಿ ಗಮನಾರ್ಹ ಸೇವೆ ಸಲ್ಲಿಸಿದವರಾಗಿರತಕ್ಕದ್ದು;

(13) ನಿರ್ದೇಶಕರು, ವಿಕಲ ಚೇತನರ ಇಲಾಖೆ;

(14) ಸಾಮಾಜಿಕ ವಿಜ್ಞಾನ ಮತ್ತು ಗ್ರಾಮೀಣ ಪುನಾರಚನಾ ಸಬಲೀಕರಣ ಶಾಲೆಯ ಮುಖ್ಯಸ್ಥರು – ಸದಸ್ಯ– ಕಾರ್ಯದರ್ಶಿ.

**52. ಸಾಮಾಜಿಕ ವಿಜ್ಞಾನ ಮತ್ತು ಗ್ರಾಮೀಣ ಪುನಾರಚನಾ ಶಾಲೆಯ ಪ್ರಕಾರ್ಯಗಳು.– ಸಾಮಾಜಿಕ** ವಿಜ್ಞಾನ ಮತ್ತು ಗ್ರಾಮೀಣ ಪುನಾರಚನಾ ಶಾಲೆಯ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(1) ಕರ್ನಾಟಕದ ಗ್ರಾಮೀಣ ಸಮಾಜಶಾಸ್ತ್ರ, ಸಂಸ್ಕೃತಿ, ತತ್ವಶಾಸ್ತ್ರ ಮತ್ತು ಧಾರ್ಮಿಕ ಮೌಲಿಕ ವ್ಯವಸ್ಥೆಗಳ ಅಧ್ಯಯನ ಮಾಡುವುದು.

(2) ಗ್ರಾಮೀಣ ಜನತೆಯ ಶಿಕ್ಷಣ ಮತ್ತು ಅವರ ದೇಶೀಯ ಜ್ಞಾನ ಮತ್ತು ಕೌಶಲ್ಯತೆಯ ಪ್ರಯೋಜನ ಪಡೆಯಲು ಸಾಮಾಜಿಕ ಆಂದೋಲನವನ್ನು ರೂಪಿಸುವುದು.

(3) ವಿವಿಧ ಬೆಂಬಲಿತ ವ್ಯವಸ್ಥೆಗಳು ಮತ್ತು ಪುನರ್ವಸತಿ ಕಾರ್ಯಕ್ರಮಗಳ ಮೂಲಕ ವಿಕಲಚೇತನ ವ್ಯಕ್ತಿಗಳು, ನಿರ್ಗತಿಕ ಮತ್ತು ವಯಸ್ಸಾದ ವ್ಯಕ್ತಿಗಳನ್ನು ಸಬಲೀಕರಿಸುವುದು.

(4) ವಿವಿಧ ಜಾತಿಗಳು ಮತ್ತು ಸಮುದಾಯಗಳ ನಡುವಿನ ಅಂತರಗಳನ್ನು ಕಡಿಮೆಮಾಡಲು ವಿನೂತನ ವಸತಿ ಮತ್ತು ಆವಾಸ ಸ್ಥಾನ ವ್ಯವಸ್ಥೆಗಳನ್ನು ಅಭಿವೃದ್ಧಿಪಡಿಸುವುದು.

(5) ಸಹಭಾಗಿತ್ವ ಗ್ರಾಮೀಣ ಮೌಲ್ಯನಿರ್ಣಯ (ಪಿಆರ್ಎ) ತಂತ್ರಗಳಂಥ ಸಾಮಾಜಿಕ ಸ್ವರೂಪ ನಿರ್ಣಯ ಸಹಭಾಗಿತ್ವ ಮಾರ್ಗಗಳ ಮೂಲಕ ಎಲ್ಲಾ ಸಮುದಾಯಗಳ ಕ್ಷೇಮಾಭಿವೃದ್ಧಿಗಾಗಿ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ರೂಪಿಸುವುದು.

(6) ಸಮಾಜದ ಆರ್ಥಿಕವಾಗಿ ದುರ್ಬಲರಾದ ವರ್ಗದವರಲ್ಲಿ ಸಾಮಾಜಿಕ ಉದ್ಯಮಶೀಲತೆ ಮತ್ತು ಕೌಶಲ್ಯಗಳನ್ನು ಅಭಿವೃದ್ಧಿಪಡಿಸುವುದು.

(7) ಸಾಮಾಜಿಕ ಸಮಸ್ಯೆಗಳ ಕ್ಷೇತ್ರದಲ್ಲಿ ಸಂಶೋಧನೆಯನ್ನು ಕೈಗೊಳ್ಳುವುದು ಮತ್ತು ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಮುಖಾಂತರ ಪರಿಹಾರಗಳನ್ನು ಕಂಡುಹಿಡಿಯುವುದು.

(8) ಲಿಂಗ ವಿವಾದಗಳು, ಬಾಲಕಾರ್ಮಿಕರು, ಜೀತದಾಳುಗಳು ಮತ್ತು ದೇವದಾಸಿ ಪದ್ಧತಿ ಮುಂತಾದಂಥ ಅನಿಷ್ಟ ಆಚರಣೆಗಳ ವಿಷಯಗಳ ಕುರಿತಾದ ಕ್ಷೇತ್ರದಲ್ಲಿ ಸಂಶೋಧನಾ ಅಧ್ಯಯನಗಳನ್ನು ಕೈಗೊಳ್ಳುವುದು.

(9) **"ಕಾರ್ಪೋರೇಟ್ ಸಾಮಾಜಿಕ ಹೊಣೆಗಾರಿಕೆ"** ಉಪಕ್ರಮಗಳಿಂದ ಬರುವ ನಿಧಿಗಳನ್ನು ಸೂಕ್ತ ಯೋಜನೆಗಳು ಮತ್ತು ನಾವಿನ್ಯತಾ ಕಾರ್ಯಕ್ರಮಗಳನ್ನು ಅಭಿವೃದ್ಧಿಪಡಿಸಲು ವಿನಿಯೋಗಿಸುವುದು.

(10) ವಿವಿಧ ಸಾಮಾಜಿಕ ಸಮೂಹಗಳ, ಅದರಲ್ಲೂ ವಿಶೇಷವಾಗಿ ಪಂಚಾಯತ್ ರಾಜ್‌ನ ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರವನ್ನು ಬಲಪಡಿಸುವುದು.

(11) ಸಮಾಜ ಕಲ್ಯಾಣ ಇಲಾಖೆ, ಬುಡಕಟ್ಟು ಕಲ್ಯಾಣ, ಹಿಂದುಳಿದ ವರ್ಗಗಳ ಕಲ್ಯಾಣ, ಅಲ್ಪಸಂಖ್ಯಾತರ ಕಲ್ಯಾಣ ಮತ್ತು ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗಳ ಮೂಲಕ ಅನುಷ್ಠಾನಗೊಂಡಿರುವ ಯೋಜನೆಗಳ ಮೌಲ್ಯ ನಿರ್ಧರಣೆ ಮತ್ತು ಮೌಲ್ಯಮಾಪನ ಅಧ್ಯಯನಗಳನ್ನು ನಡೆಸುವುದು.

(12) ಅಧಿಸೂಚಿಸಿರದ ಬುಡಕಟ್ಟುಗಳು, ತಮ್ಮದೇ ಆದ ಮನೆ, ಗ್ರಾಮ ಅಥವಾ ಭೂಮಿಗಳನ್ನು ಹೊಂದಿರದ ಜನರು, ಅಲೆಮಾರಿಗಳು ಮತ್ತು ಅರೆ – ಅಲೆಮಾರಿ ಸಮುದಾಯಗಳು, ಬುಡಕಟ್ಟುಗಳು ಮುಂತಾದಂಥ ಎಲ್ಲಾ ಸಮುದಾಯಗಳ ಮತ್ತು ಅಭಿವೃದ್ಧಿಯಾಗಿಲ್ಲದ ಸಾಮಾಜಿಕ ಸಮೂಹಗಳ ಕ್ಷೇಮಾಭಿವೃದ್ಧಿಗೆ ಸಂಬಂಧಿಸಿದ ನೀತಿಯ ಮೇಲೆ ಸರ್ಕಾರಕ್ಕೆ ಸಲಹೆ ನೀಡುವುದು.

(13) ವಿಚಾರ ಸಂಕಿರಣಗಳು, ಕಾರ್ಯಗಾರಗಳು, ಕ್ಷೇತ್ರಕಾರ್ಯವಿಭಾಗ, ವಿದ್ಯಾರ್ಥಿಗಳ ಸಾಮಾಜಿಕಾಭಿವೃದ್ಧಿ ಪ್ರಯೋಗಾರ್ಥಿಗಳ ಭಾಗೀದಾರರು, ಜನಪ್ರತಿನಿಧಿಗಳು ಮುಂತಾದವರಿಗೆ ವ್ಯಾಸಂಗ ಕ್ರಮ ವಿಷಯಗಳನ್ನು (course contents) ಅಭಿವೃದ್ಧಿಪಡಿಸುವುದು.

**53. ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿ ಶಾಲೆ.–** (1) ಈ ಮುಂದಿನ ಸದಸ್ಯರುಗಳನ್ನು ಒಳಗೊಂಡ ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿ ಶಾಲೆಯು ಇರತಕ್ಕದ್ದು, ಎಂದರೆ:–

(i) ಕುಲಪತಿಗಳು – ಅಧ್ಯಕ್ಷರು;

(ii) ಎಲ್ಲಾ ಶಾಲೆಗಳ ತರಬೇತಿ, ಪ್ರಕಾಶನ ಮತ್ತು ಮೇಲ್ವಿಚಾರಣೆಯ ನಿರ್ದೇಶಕರು;

(iii) ನಿರ್ದೇಶಕರು, ಸಂಶೋಧನೆ, ಅನ್ವೇಷಣೆ ಮತ್ತು ಮೌಲ್ಯಮಾಪನಾ ಕೇಂದ್ರ;

(iv) ಎಲ್ಲಾ ಶಾಲೆಗಳ ಮತ್ತು ಪ್ರಾದೇಶಿಕ ಕೇಂದ್ರಗಳ ಮುಖ್ಯಸ್ಥರು;

(v) ಕುಲಪತಿಗಳಿಂದ ನಾಮನಿರ್ದೇಶಿತರಾದ, ಗ್ರಾಮೀಣಾಭಿವೃದ್ಧಿಯಲ್ಲಿ ವಿಶೇಷ ಜ್ಞಾನ ಮತ್ತು ಅನುಭವ ಹೊಂದಿರುವ, ಇಬ್ಬರು ಪ್ರಗತಿಪರ ಗ್ರಾಮಸ್ಥರು;

(vi) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೃಷಿ ಉತ್ಪನ್ನ ಸಂಸ್ಕರಣ ಮತ್ತು ರಫ್ತು ನಿಗಮ ನಿಯಮಿತ, (ಕೆ.ಎ.ಪಿ.ಪಿ.ಇ.ಸಿ) ಅಥವಾ ಅವರ ನಾಮನಿರ್ದೇಶಿತರು, ಬೆಂಗಳೂರು;

(vii) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ;

(viii) ನಿರ್ದೇಶಕರು, ನೀರು ಸರಬರಾಜು ಮತ್ತು ನೈರ್ಮಲ್ಯತೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ;

(ix) ನಿರ್ದೇಶಕರು ನಿರ್ಮಿತಿ ಕೇಂದ್ರ;

(x) ನಿರ್ದೇಶಕರು, ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು;

(xi) ಆಯುಕ್ತರು, ಜವಳಿ;

(xii) ನಿರ್ದೇಶಕರು, ಪಂಚಾಯತ್ ರಾಜ್;

(xiii) ಕರ್ನಾಟಕ ರಾಜ್ಯ ಗ್ರಾಮೀಣ ಜೀವನಾಧಾರ ಪ್ರವರ್ತನ ಸಂಘದ ಒಬ್ಬ ಪ್ರತಿನಿಧಿ;

(xiv) ಸರ್ಕಾರದಿಂದ ನಾಮ ನಿರ್ದೇಶಿತರಾದ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಹಾಗೂ ಗ್ರಾಮ ಪಂಚಾಯಿತಿಯಿಂದ ತಲಾ ಒಬ್ಬ ಸದಸ್ಯರು ಅವರಲ್ಲಿ ಒಬ್ಬರು ಮಹಿಳೆಯಾಗಿರತಕ್ಕದ್ದು;

(xv) ವ್ಯವಸ್ಥಾಪಕ ನಿರ್ದೇಶಕರು, ಕೈಮಗ್ಗ ಸಂಶೋಧನೆ ಮತ್ತು ಅಭಿವೃದ್ಧಿ ಕೇಂದ್ರ;

(xvi) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಾಲು ಒಕ್ಕೂಟ;

(xvii) ಉಪಾಧ್ಯಕ್ಷರು, ಭಾರತೀಯ ಕೃಷಿ ಕೈಗಾರಿಕೆಗಳ ಪ್ರತಿಷ್ಠಾನ (ಬೈಫ್)

(xviii) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕರಕುಶಲ ಅಭಿವೃದ್ಧಿ ನಿಗಮ;

(xix) ಮುಖ್ಯಕಾರ್ಯನಿರ್ವಾಹಣಾಧಿಕಾರಿ, ಸಮುದಾಯ ಪಾಲುದಾರಿಕೆ ಮತ್ತು ಸಬಲೀಕರಣ ಸಂಘ, ಬೆಟ್ಟದೂರು, ಕಾಂಪೌಡ್, ಮಾಳಮಡ್ಡಿ, ಧಾರವಾಡ– 580007:

(xx) ನಿರ್ದೇಶಕರು, ತರಬೇತಿ ಮತ್ತು ಟೂಲ್ ರೂಮ್ ಕೇಂದ್ರ, ಕರ್ನಾಟಕ ಸರ್ಕಾರ;

(xxi) ವಲಯ ಯೋಜನಾ ನಿರ್ದೇಶಕರು, ಭಾರತೀಯ ಕೃಷಿ ಅನುಸಂಧಾನ ಪರಿಷತ್ತು;

(xxii) ಕರ್ನಾಟಕದಲ್ಲಿನ ಎಲ್ಲಾ ಪ್ರಾದೇಶಿಕ ಗ್ರಾಮೀಣ ಬ್ಯಾಂಕ್‌ಗಳ ಅಧ್ಯಕ್ಷರು;

(xxiii) ವ್ಯವಸ್ಥಾಪಕ ನಿರ್ದೇಶಕರು, ಮೀನುಗಾರಿಕೆ ಅಭಿವೃದ್ಧಿ ನಿಗಮ;

(xxiv) ವ್ಯವಸ್ಥಾಪಕ ನಿರ್ದೇಶಕರು, ಅಲ್ಪಸಂಖ್ಯಾತ ಅಭಿವೃದ್ಧಿ ನಿಗಮ;

(xxv) ವ್ಯವಸ್ಥಾಪಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿಗಮ;

(xxvi) ವ್ಯವಸ್ಥಾಪಕ ನಿರ್ದೇಶಕರು, ಡಾ: ಅಂಬೇಡ್ಕರ್ ಅನುಸೂಚಿತ ಜಾತಿಗಳ ಅಭಿವೃದ್ಧಿ ನಿಗಮ;

(xxvii) ವ್ಯವಸ್ಥಾಪಕ ನಿರ್ದೇಶಕರು ಅನುಸೂಚಿತ ಪಂಗಡಗಳ ಅಭಿವೃದ್ಧಿ ನಿಗಮ;

(xxviii) ವ್ಯವಸ್ಥಾಪಕ ನಿರ್ದೇಶಕರು, ದೇವರಾಜ್ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ;

(xxix) ನಿರ್ದೇಶಕರು, ಆಹಾರ ಸಂಸ್ಕರಣೆ;

(xxx) ಕೇಂದ್ರೀಯ ಆಹಾರ ಸಂಸ್ಕರಣೆ ಮತ್ತು ಸಂಶೋಧನಾ ಸಂಸ್ಥೆಯ ಪ್ರತಿನಿಧಿ, ಮೈಸೂರು;

(xxxi) ವ್ಯವಸ್ಥಾಪಕ ನಿರ್ದೇಶಕರು, ಕೌಶಲ್ಯ ಅಭಿವೃದ್ಧಿ ನಿಗಮ;

(xxxii) ಕುಲಪತಿಗಳಿಂದ ನಾಮನಿರ್ದೇಶಿತರಾದ ಶ್ರವಣ, ದೃಶ್ಯ–ಶ್ರವಣ ಮತ್ತು ಮುದ್ರಣ ಮಾಧ್ಯಮದ ತಲಾ ಒಬ್ಬ ಪ್ರತಿನಿಧಿ;

(xxxiii) ಸಭೆಯ ಚರ್ಚಾ ವಿಷಯಗಳ ಕುರಿತಾಗಿ ವಿಶೇಷ ಜ್ಞಾನದ ಪ್ರಯೋಜನವನ್ನು ಪಡೆಯುವ ಸಲುವಾಗಿ, ಕುಲಪತಿಗಳಿಂದ ನಾಮನಿರ್ದೇಶಿತನಾದ ಒರ್ವ ಕೃಷಿ ಕೈಗಾರಿಕೋದ್ಯಮಿ;

(xxxiv) ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿ ಶಾಲೆಯ ನಿರ್ದೇಶಕರು – ಸದಸ್ಯ–ಕಾರ್ಯದರ್ಶಿ.

(2) ಅಧ್ಯಕ್ಷರು ಅಗತ್ಯವಿರುವಾಗಲೆಲ್ಲ ಸಭೆಗಳಲ್ಲಿ ಭಾಗವಹಿಸಲು ಈ ಮುಂದಿನ ಯಾವುದೇ ಸದಸ್ಯರುಗಳನ್ನು ಆಮಂತ್ರಿಸಬಹುದು,–

(i) ನಿರ್ದೇಶಕರು, ತೋಟಗಾರಿಕೆ ಅಥವಾ ನಿರ್ದೇಶಕರು, ರೇಷ್ಮೆ;

(ii) ಆಯುಕ್ತರು, ಕೃಷಿ, ಕರ್ನಾಟಕ ಸರ್ಕಾರ;

(iii) ಆಯುಕ್ತರು, ಉದ್ಯೋಗ ಮತ್ತು ತರಬೇತಿ;

(iv) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗ;

(v) ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಥವಾ ಅವರ ನಾಮನಿರ್ದೇಶಿತರು;

(vi) ವ್ಯವಸ್ಥಾಪಕ ನಿರ್ದೇಶಕರು, ರಾಜೀವ್‌ಗಾಂಧಿ ವಸತಿ ನಿಗಮ;

(vii) ಕೈಗಾರಿಕಾ ಅಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ಕೈಗಾರಿಕೋದ್ಯಮಗಳು ಮತ್ತು ವಾಣಿಜ್ಯ;

(viii) ನಿರ್ದೇಶಕರು, ಮಹಿಳೆ ಮತ್ತು ಮಕ್ಕಳ ಕಲ್ಯಾಣ;

(ix) ನಿರ್ದೇಶಕರು, ಪಶುಸಂಗೋಪನೆ;

(x) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉಗ್ರಾಣ ನಿಗಮ;

(xi) ನಿರ್ದೇಶಕರು, ಮಾರುಕಟ್ಟೆ.

(3) ಪದನಿಮಿತ್ತ ಸದಸ್ಯರ ಹೊರತಾಗಿ, ವಿಸ್ತರಣಾ ಚಟುವಟಿಕೆಗಳು, ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿ ನಿರ್ದೇಶನಾಲಯದ ಎಲ್ಲಾ ಸದಸ್ಯರ ಪದಾವಧಿಯು, ಮೂರು ವರ್ಷಗಳು.

(4) ಸಭೆಗಳ ಕಾರ್ಯವಿಧಾನವು ಕಾಲಕಾಲಕ್ಕೆ ರಚಿತವಾಗುವ ವಿನಿಯಮಗಳಲ್ಲಿ ನಿರೂಪಿಸಿರುವಂತೆ ಇರತಕ್ಕದ್ದು;

**54. ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿ ಶಾಲೆಯ ಪ್ರಕಾರ್ಯಗಳು.–** ಕೌಶಲ್ಯ ಮತ್ತು ಉದ್ಯಮಶೀಲತಾ ಅಭಿವೃದ್ಧಿ ಶಾಲೆಯ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(1) ಎಲ್ಲಾ ವಿವಿಧ ಕರಕುಶಲತೆಯನ್ನು ಉತ್ತೇಜಿಸುವುದು, ಅಭಿವೃದ್ಧಿಪಡಿಸುವುದು ಮತ್ತು ವಿನ್ಯಾಸಗೊಳಿಸುವುದು.

(2) ಗ್ರಾಮೀಣ ಪ್ರದೇಶದಲ್ಲಿನ ಅತ್ಯಂತ ಕೌಶಲ್ಯ ಇರುವ ಗ್ರಾಮೀಣ ಕುಶಲಕರ್ಮಿಗಳನ್ನು ಗುರುತಿಸುವುದು ಮತ್ತು ಅವರ ಕೌಶಲ್ಯಗಳು ಇತರ ಕುಶಲಕರ್ಮಿಗಳಿಗೆ ಪ್ರಚುರಪಡಿಸುವುದು;

(3) ವಿನೂತನ ಮತ್ತು ಉಪಯುಕ್ತ ಕೃಷಿ ಸಾಧನಗಳನ್ನು ಮತ್ತು ಸಲಕರಣೆಗಳನ್ನು ವಿನ್ಯಾಸಗೊಳಿಸುವುದು ಮತ್ತು ಅಭಿವೃದ್ಧಿಪಡಿಸುವುದು;

(4) ವಿವಿಧ ಬಗೆಯ ಆಹಾರ ಧಾನ್ಯಗಳು, ಆಹಾರೋತ್ಪನ್ನಗಳು, ಹಣ್ಣುಗಳು ಮತ್ತು ತರಕಾರಿಗಳಿಗಾಗಿ ದಾಸ್ತಾನು ಸೌಕರ್ಯಗಳನ್ನು ಅನ್ವೇಷಿಸುವುದು, ವಿನ್ಯಾಸಮಾಡುವುದು ಮತ್ತು ಅಭಿವೃದ್ಧಿಪಡಿಸುವುದು;

(5) ವಿವಿಧ ಬಗೆಯ ಕೃಷಿ, ಹೈನು, ಪ್ರಾಣಿ ಮತ್ತು ತೋಟಗಾರಿಕಾ ಉತ್ಪನ್ನಗಳಿಗಾಗಿ ಪ್ಯಾಕ್ ಮಾಡುವ ಸಾಮಗ್ರಿಯನ್ನು ಮತ್ತು ಸಂರಕ್ಷಣಾ ತಂತ್ರಗಳನ್ನು ವಿನ್ಯಾಸಗೊಳಿಸುವುದು ಮತ್ತು ಅಭಿವೃದ್ಧಿಪಡಿಸುವುದು;

(6) ತೋಟಗಾರಿಕೆ ಮತ್ತು ಪುಷ್ಪ ಕೃಷಿ, ರೇಷ್ಮೆ ಕೃಷಿ ಮುಂತಾದ ಕ್ಷೇತ್ರದಲ್ಲಿ ವಿನೂತನ ಕೃಷಿ ತಾಂತ್ರಿಕತೆಗಳನ್ನು ಅಭಿವೃದ್ಧಿಪಡಿಸುವುದು;

(7) ಜಾಗತಿಕ ಮಾರುಕಟ್ಟೆಗಳ ಅವಶ್ಯಕತೆಗಳಿಗೆ ಪಾಲುದಾರರನ್ನು ಪರಿಚಯಿಸುವುದು;

(8) ಸಿರಿಧಾನ್ಯಗಳು (millets) ತರಕಾರಿಗಳು ಮುಂತಾದಂಥ ಪೌಷ್ಠಿಕಾಂಶಯುಕ್ತ, ಕಡಿಮೆ ವೆಚ್ಚದ, ದೇಶೀಯ ಆಹಾರ ಉತ್ಪನ್ನಗಳ ಉತ್ಪಾದನೆಗಾಗಿ ರೈತರಿಗೆ ಉತ್ತೇಜನ ನೀಡುವುದು;

(9) ದೇಶೀಯ ಮತ್ತು ಪೌಷ್ಠಿಕಾಂಶಯುಕ್ತ ಬೆಳೆಗಳು, ತರಕಾರಿ ಮತ್ತು ಹಣ್ಣುಗಳ ಮಾದರಿ ಕೃಷಿ ಕೇಂದ್ರಗಳನ್ನು ಅಭಿವೃದ್ಧಿಪಡಿಸುವುದು;

(10) ನಿಷ್ಕೃಷ್ಟ (precision) ಬೇಸಾಯಕ್ಕಾಗಿ ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಆಧಾರದಲ್ಲಿ ಕೃಷಿ ಭೂಮಿಗಳನ್ನು ದತ್ತು ತೆಗೆದುಕೊಳ್ಳುವುದು;

(11) ಪಾಳುಭೂಮಿ, ಚವಳುಭೂಮಿ, ಜೌಗುಭೂಮಿ, ಕ್ಷಾರೀಯಭೂಮಿ ಹಾಗೂ ಇನ್ನಿತರ ಸಮಸ್ಯಾತ್ಮಕ ಭೂಮಿಗಳನ್ನು ಸಾಗುವಳಿ ಮತ್ತು ಪ್ರಯೋಜನದ ಅಡಿಯಲ್ಲಿ ತರಲು ಅವುಗಳಿಗಾಗಿ ವಿನೂತನ ವಿಧಾನಗಳನ್ನು ಮತ್ತು ಕಾರ್ಯತಂತ್ರಗಳನ್ನು ರೂಪಿಸುವುದು;

(12) ನೀರು ಮತ್ತು ಇಂಧನದ ಸ್ವಾವಲಂಬನೆ ಮತ್ತು ಸಮರ್ಥ ಬಳಕೆಯನ್ನು ಸೃಜಿಸುವುದು;

(13) ಹಣ್ಣು ಮತ್ತು ಮರಮುಟ್ಟುಗಳ ರೂಪದಲ್ಲಿ ಔಷಧೀಯ ಮತ್ತು ಸುಗಂಧ ಸಸ್ಯಗಳನ್ನು ಹಾಗೂ ಉಪಯುಕ್ತವಾಗುವ ಗಿಡಮರಗಳನ್ನು ಬೆಳೆಸಲು ಉತ್ತೇಜಿಸುವುದು ಮತ್ತು ಜೈವಿಕ ವೈವಿಧ್ಯತೆಯನ್ನು ನಿರ್ವಹಿಸುವುದು;

(14) ಉದ್ಯಮಗಳನ್ನು ಪ್ರಾರಂಭಿಸಲು ಮತ್ತು ಉದ್ಯಮಶೀಲತ್ವವನ್ನು ಉತ್ತೇಜಿಸಲು ಸಾಮರ್ಥ್ಯ ವೃದ್ಧಿಗಾಗಿ ಕ್ಷೇತ್ರೀಯ ಮತ್ತು ಕ್ಷೇತ್ರೀಯೇತರ ತರಬೇತಿ ಕಾರ್ಯಕ್ರಮಗಳನ್ನು, ಕಾರ್ಯಾಗಾರಗಳನ್ನು, ವಿಚಾರ ಸಂಕಿರಣಗಳನ್ನು ಆಯೋಜಿಸುವುದು;

(15) ಆರ್ಥಿಕ ವ್ಯವಸ್ಥಾಪನೆಯಲ್ಲಿ ಹಿತಾಸಕ್ತರಿಗೆ ತರಬೇತಿ ನೀಡುವುದು;

(16) ವಿವಿಧ ಹಣಕಾಸು ಸಂಸ್ಥೆಗಳಲ್ಲಿ ಸಾಲ ಲಭ್ಯತೆಯ ಬಗ್ಗೆ ಮಾಹಿತಿಯನ್ನು ಪ್ರಚುರಪಡಿಸುವುದು;

(17) ವ್ಯಕ್ತಿಗತ ವ್ಯವಹಾರ ಯೋಜನೆಗಳು ಮತ್ತು ಅಂಕಣಿತ ಯೋಜನೆಗಳನ್ನು ಸಿದ್ಧಪಡಿಸುವುದು.

**55. ಪ್ರಾಧಿಕಾರಗಳ ಸದಸ್ಯತ್ವವನ್ನು ಹೊಂದಲು ನಿರ್ಬಂಧಗಳು.–** (1) ಈ ಅಧಿನಿಯಮದ ಅಡಿಯಲ್ಲಿ ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು ಎರಡನೇ ಅವಧಿಗಾಗಿ ನಾಮನಿರ್ದೇಶನ ಹೊಂದಲು ಅಥವಾ ಚುನಾಯಿತನಾಗಲು ಅರ್ಹನಾಗಿರತಕ್ಕದ್ದಲ್ಲ.

(2) ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ಸದಸ್ಯನು, ದುರ್ವರ್ತನೆ ಅಥವಾ ದುರ್ನಡತೆ ಆಧಾರದ ಮೇಲೆ ಅಥವಾ ಅನ್ಯಥಾ ವಿಚಾರಣೆಯನ್ನು ನಡೆಸಿದ ತರುವಾಯ ಕುಲಾಧಿಪತಿಯಿಂದ ಯಾವುದೇ ಕಾಲದಲ್ಲಿ ಅಂಥ ಸದಸ್ಯತ್ವದಿಂದ ತೆಗೆದು ಹಾಕಲ್ಪಡುವುದಕ್ಕೆ ಗುರಿಯಾಗತಕ್ಕದ್ದು:

ಪರಂತು, ಕಾರ್ಯನಿರ್ವಾಹಣಾ ಪರಿಷತ್ತಿನ ಅಥವಾ ಶೈಕ್ಷಣಿಕ ಪರಿಷತ್ತಿನ ಯಾವೊಬ್ಬ ಸದಸ್ಯನು ನಿವೃತ್ತಿ ವಯಸ್ಸನ್ನು ತಲುಪಿದ ನಂತರ ಆತನ ಸದಸ್ಯತ್ವವು ನಿಂತುಹೋಗತಕ್ಕದ್ದು.

(3) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ ಆದರೆ ಅನ್ಯಥಾ ಉಪಬಂಧಿಸಿದುದನ್ನುಳಿದು, ವಿಶ್ವವಿದ್ಯಾಲಯದ ಬೋಧಕ ಮತ್ತು ಬೋಧಕೇತರ ಅಥವಾ ಲಿಪಿಕ ವರ್ಗದ ಯಾವೊಬ್ಬ ನೌಕರನು ಯಾವುದೇ ಸಾಮರ್ಥ್ಯದಲ್ಲಿರುವ ವ್ಯಕ್ತಿಯು ಈ ಅಧ್ಯಾದೇಶದ ಅಡಿಯಲ್ಲಿ ಯಾವುವೇ ಪ್ರಾಧಿಕಾರಗಳ ಸದಸ್ಯನಾಗಿ ನಾಮನಿರ್ದೇಶಿತನಾಗಲು ಅರ್ಹನಾಗಿರತಕ್ಕದ್ದಲ್ಲ.

(4) ವಿಶ್ವವಿದ್ಯಾಲಯದ ಪ್ರಾಧಿಕಾರಗಳಲ್ಲಿನ ಪದನಿಮಿತ್ತ ಸದಸ್ಯರ ಪದಾವಧಿಯು ಅವರು ಧಾರಣ ಮಾಡಿದ ಹುದ್ದೆಯಲ್ಲಿನ ಅವರ ಪದಾವಧಿಯೊಂದಿಗೆ ಸಹವರ್ತಿಯಾಗಿರತಕ್ಕದ್ದು.

## ಅಧ್ಯಾಯ – V

## ವಿನಿಯಮಗಳು, ಪರ್ಯಾದೇಶಗಳು ಮತ್ತು ನಿಯಮಗಳು

**56. ವಿನಿಯಮಗಳು.–** (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಕಾರ್ಯನಿರ್ವಾಹಕ ಪರಿಷತ್ತು, ತನ್ನಲ್ಲಿ ನಿಹಿತವಾಗಿರುವ ಇತರ ಎಲ್ಲಾ ಅಧಿಕಾರಗಳಿಗೆ ಹೆಚ್ಚುವರಿಯಾಗಿ, ವಿಶ್ವವಿದ್ಯಾಲಯದ ವ್ಯವಹರಣೆಗಳ ಆಡಳಿತ ಮತ್ತು ವ್ಯವಸ್ಥಾಪನೆಗಾಗಿ ಉಪಬಂಧವನ್ನು ಕಲ್ಪಿಸಲು ವಿನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊಂದಿರತಕ್ಕದ್ದು:

ಪರಂತು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸ್ಥಾನ–ಮಾನಕ್ಕೆ, ಅಧಿಕಾರಗಳಿಗೆ ಅಥವಾ ರಚನೆಗೆ ಬಾಧಕವಾಗುವ ಯಾವುದೇ ವಿನಿಯಮವನ್ನು, ಅಂತಹ ಪ್ರಾಧಿಕಾರಕ್ಕೆ ಪ್ರಸ್ತಾವಿತ ಬದಲಾವಣೆಗಳ ಕುರಿತಾಗಿ ಲಿಖಿತ ಅಭಿಪ್ರಾಯವನ್ನು ವ್ಯಕ್ತಪಡಿಸಲು ಅವಕಾಶ ನೀಡುವವರೆಗೆ ಮತ್ತು ಹಾಗೆ ವ್ಯಕ್ತಪಡಿಸಿದ ಯಾವುದೇ ಅಭಿಪ್ರಾಯವನ್ನು ಕಾರ್ಯನಿರ್ವಾಹಕ ಪರಿಷತ್ತು ಪರಿಶೀಲಿಸುವವರೆಗೆ ಮಾಡತಕ್ಕದ್ದಲ್ಲ:

ಮತ್ತು ಪರಂತು, ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್ತಿನ ಪೂರ್ವ ಸಹಮತಿಯನ್ನು ಪಡೆದ ಹೊರತು, ಈ ಮುಂದಿನ ಎಲ್ಲಾ ಅಥವಾ ಯಾವುವೇ ವಿಷಯಗಳಿಗೆ ಬಾಧಕಉಂಟುಮಾಡುವ ಯಾವುದೇ ವಿನಿಯಮಗಳನ್ನು ಮಾಡತಕ್ಕದ್ದಲ್ಲ, ತಿದ್ದುಪಡಿಗೊಳಿಸತಕ್ಕದ್ದಲ್ಲ ಅಥವಾ ನಿರಸನಗೊಳಿಸತಕ್ಕದ್ದಲ್ಲ, ಎಂದರೆ:–

(ಎ) ಬೋಧನೆ, ಸಂಶೋಧನೆ, ವಿಸ್ತರಣೆ ಮತ್ತು ಸಂಬಂಧಿತ ಶೈಕ್ಷಣಿಕ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸಲು ಜವಾಬ್ದಾರವಾಗಿರುವ ಪ್ರಾಧಿಕಾರಗಳು;

(ಬಿ) ಪದವಿಗಳು, ಡಿಪ್ಲೋಮಾಗಳು, ಸರ್ಟಿಫಿಕೇಟ್‌ಗಳು ಮತ್ತು ಇತರ ಶೈಕ್ಷಣಿಕ ಪುರಸ್ಕಾರಗಳನ್ನು ಹಿಂಪಡೆಯುವುದು;

(ಸಿ) ವ್ಯಾಸಂಗಕ್ರಮಗಳು, ವಿಭಾಗಗಳು, ಸಭಾಂಗಣಗಳು ಮತ್ತು ಸಂಸ್ಥೆಗಳನ್ನು ಸ್ಥಾಪಿಸುವುದು ಮತ್ತು ರದ್ದುಗೊಳಿಸುವುದು;

(ಡಿ) ಫೆಲೋಷಿಪ್‌ಗಳು, ವಿದ್ಯಾರ್ಥಿ ವೇತನಗಳು, ಶಿಷ್ಯ ವೇತನ, ಪ್ರದರ್ಶನಗಳು, ಪದಕಗಳು ಮತ್ತು ಬಹುಮಾನಗಳನ್ನು ಪ್ರಾರಂಭಿಸುವುದು;

(ಇ) ಪರೀಕ್ಷಕರ ನೇಮಕಾತಿಯ ಷರತ್ತುಗಳು ಮತ್ತು ವಿಧಾನಗಳು ಅಥವಾ ಪರೀಕ್ಷೆಗಳನ್ನು ನಡೆಸುವುದು ಅಥವಾ ಗುಣಮಟ್ಟಗಳು ಅಥವಾ ಇತರ ಯಾವುದೇ ಅಧ್ಯಯನದ ಕೋರ್ಸ್‌ಗಳು;

(ಎಫ್) ವಿದ್ಯಾರ್ಥಿಗಳ ದಾಖಲಾತಿ ಅಥವಾ ಪ್ರವೇಶ ವಿಧಾನ;

(ಜಿ) ವಿಶ್ವವಿದ್ಯಾಲಯ ಪರೀಕ್ಷೆಗಳಿಗೆ ಸಮಾನವೆಂದು ಪರೀಕ್ಷೆಗಳನ್ನು ಮಾನ್ಯ ಮಾಡುವುದು.

(2) (1)ನೇ ಉಪಪ್ರಕರಣದ (ಎ) ನಿಂದ (ಜಿ) ವರೆಗಿನ ಖಂಡಗಳಲ್ಲಿ ನಿರೂಪಿಸಿರುವ ಎಲ್ಲಾ ವಿಷಯಗಳು ಮತ್ತು ಪೂರಕ ಹಾಗೂ ಅದಕ್ಕೆ ಸಂಬಂಧಿತ ವಿಚಾರಗಳ ಕುರಿತಾಗಿ ವಿನಿಯಮಗಳನ್ನು ಪ್ರಸ್ತಾವಿಸುವ ಅಧಿಕಾರವು ಶೈಕ್ಷಣಿಕ ಪರಿಷತ್ತಿಗೆ ಇರತಕ್ಕದ್ದು.

(3) ಶೈಕ್ಷಣಿಕ ಪರಿಷತ್ ಪ್ರಸ್ತಾವಿಸಿರುವ ಕರಡು ವಿನಿಯಮಗಳನ್ನು ಕಾರ್ಯನಿರ್ವಾಹಕ ಪರಿಷತ್ತು ತಿರಸ್ಕರಿಸಿದ್ದರೆ ಶೈಕ್ಷಣಿಕ ಪರಿಷತ್ತು ಕುಲಾಧಿಪತಿಗಳಿಗೆ ಮೇಲ್ಮನವಿ ಸಲ್ಲಿಸಬಹುದು ಮತ್ತು ಪ್ರಸ್ತಾವಿತ ವಿನಿಯಮಗಳನ್ನು ಕಾರ್ಯನಿರ್ವಾಹಕ ಪರಿಷತ್ತು ಮತ್ತು ಶೈಕ್ಷಣಿಕ ಪರಿಷತ್ತು ಒಟ್ಟಿಗೆ ಸಭೆ ಸೇರುವ ಮಹಾ ಪರಿಷತ್ತಿನ ಮುಂಬರುವ ಸಭೆಯಲ್ಲಿ, ಅದರ ಅನುಮೋದನೆಗಾಗಿ, ಮಂಡಿಸುವಂತೆ ಕುಲಾಧಿಪತಿಗಳು ನಿರ್ದೇಶಿಸಿ ಆದೇಶಿಸಬಹುದು.

(4) ಕಾರ್ಯನಿರ್ವಾಹಕ ಪರಿಷತ್ತು ರಚಿಸಿರುವ ವಿನಿಯಮಗಳನ್ನು ಕುಲಾಧಿಪತಿಗಳಿಗೆ ಸರ್ಕಾರದ ಮೂಲಕ ಅನುಮೋದನೆಗಾಗಿ ಸಲ್ಲಿಸತಕ್ಕದ್ದು. ಅವು ಕುಲಾಧಿಪತಿಗಳು ಅನುಮೋದಿಸಿದ ದಿನಾಂಕದಿಂದ ಅಥವಾ ಕುಲಾಧಿಪತಿಗಳು ನಿರ್ದಿಷ್ಟಪಡಿಸಿದ ಇತರ ಯಾವುದೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**57. ಪರ್ಯಾದೇಶಗಳು.**- (1) ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ಪರ್ಯಾದೇಶಗಳು ಈ ಮುಂದಿನ ಎಲ್ಲಾ ವಿಷಯಗಳಿಗೆ ಅಥವಾ ಅವುಗಳಲ್ಲಿ ಯಾವುದಕ್ಕಾದರೂ ಉಪಬಂಧವನ್ನು ಕಲ್ಪಿಸಬಹುದು, ಎಂದರೆ:-

(ಎ) ವಿದ್ಯಾರ್ಥಿಗಳಿಗೆ, ವಿಶ್ವವಿದ್ಯಾಲಯಕ್ಕೆ ಪ್ರವೇಶ ನೀಡುವುದು ಮತ್ತು ವಿಶ್ವವಿದ್ಯಾಲಯ ಪ್ರವೇಶಕ್ಕಾಗಿ ಶುಲ್ಕ ವಿಧಿಸುವುದು;

(ಬಿ) ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೋಮಾಗಳು ಮತ್ತು ಇತರ ಶೈಕ್ಷಣಿಕ ಪುರಸ್ಕಾರಗಳನ್ನು ಪಡೆಯುವುದಕ್ಕಾಗಿ ವ್ಯಾಸಂಗ ಕ್ರಮಗಳು;

(ಸಿ) ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೋಮಾಗಳು ಮತ್ತು ಇತರ ಶೈಕ್ಷಣಿಕ ಪುರಸ್ಕಾರಗಳನ್ನು ಪಡೆಯಲು ವಿದ್ಯಾರ್ಥಿಗಳಿಗೆ ವ್ಯಾಸಂಗ ಕ್ರಮಕ್ಕೆ ಪ್ರವೇಶ ನೀಡುವ ಬಗೆಗಿನ ಷರತ್ತುಗಳು;

(ಡಿ) ವಿಶ್ವವಿದ್ಯಾಲಯದ ಪರೀಕ್ಷೆಗಳನ್ನು ನಡೆಸುವುದು ಮತ್ತು ವಿದ್ಯಾರ್ಥಿಗಳಿಗೆ ಅಂಥ ಪರೀಕ್ಷೆಗಳಿಗೆ ಪ್ರವೇಶ ನೀಡುವ ಬಗೆಗಿನ ಷರತ್ತುಗಳು;

(ಇ) ಪರೀಕ್ಷೆಗಳಿಗೆ ವಿದ್ಯಾರ್ಥಿಗಳು ಹಾಜರಾಗುವುದಕ್ಕೆ ಸಂಬಂಧಿಸಿದಂತೆ ವಿನಾಯಿತಿಯನ್ನು ನೀಡಬಹುದಾದಂಥ ರೀತಿ;

(ಎಫ್) ಪರೀಕ್ಷೆ ನಡೆಸುವ ನಿಕಾಯಗಳು ಮತ್ತು ಪರೀಕ್ಷಕರಿಗಾಗಿ ನೇಮಕಾತಿ ಷರತ್ತುಗಳು ಮತ್ತು ನೇಮಕಾತಿ ರೀತಿ ಹಾಗೂ ಅವರ ಕರ್ತವ್ಯಗಳು;

(ಜಿ) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತು ನಿರ್ವಹಣೆ;

(ಎಚ್) ವ್ಯಾಸಂಗ ಕ್ರಮಗಳು, ಸಂಶೋಧನೆ, ಪ್ರಯೋಗ ಮತ್ತು ಪ್ರಾಯೋಗಿಕ ತರಬೇತಿಗಾಗಿ ಹಾಗೂ ವಿಶ್ವವಿದ್ಯಾಲಯದ ಪದವಿಗಳ, ಡಿಪ್ಲೋಮಾಗಳ ಮತ್ತು ಇತರ ಶೈಕ್ಷಣಿಕ ಪುರಸ್ಕಾರಗಳ ಪರೀಕ್ಷೆಗಳಿಗೆ ಪ್ರವೇಶಾವಕಾಶಕ್ಕಾಗಿ ವಿಧಿಸಬೇಕಾದ ಫೀಜುಗಳು;

(ಐ) ಈ ಅಧಿನಿಯಮ ಅಥವಾ ವಿನಿಯಮಗಳ ಪ್ರಕಾರ ಅಥವಾ ಪರ್ಯಾದೇಶಗಳ ಮೂಲಕ ಉಪಬಂಧ ಕಲ್ಪಿಸಬೇಕಾದ ಅಥವಾ ಕಲ್ಪಿಸಬಹುದಾದ ಯಾವುದೇ ಇತರ ವಿಷಯ;

(2) ಶೈಕ್ಷಣಿಕ ಪರಿಷತ್ತು ಪ್ರಸ್ತಾಪಿಸಿದ ಯಾವುವೇ ಪರ್ಯಾದೇಶಗಳ ಕರಡನ್ನು ತಿದ್ದುಪಡಿ ಮಾಡಲು ಕಾರ್ಯನಿರ್ವಾಹಕ ಪರಿಷತ್ತಿಗೆ ಅಧಿಕಾರವಿರತಕ್ಕದ್ದಲ್ಲ, ಆದರೆ, ಅದು ಪ್ರಸ್ತಾವವನ್ನು ತಿರಸ್ಕರಿಸಬಹುದು ಅಥವಾ ಕಾರ್ಯನಿರ್ವಾಹಕ ಪರಿಷತ್ತು ಸೂಚಿಸಬಹುದಾದಂಥ ತಿದ್ದುಪಡಿಗಳೊಂದಿಗೆ, ಸಂಪೂರ್ಣವಾಗಿ ಅಥವಾ ಭಾಗಶಃ ಮರುಪರಿಶೀಲನೆಗಾಗಿ ಕರಡನ್ನು ಶೈಕ್ಷಣಿಕ ಪರಿಷತ್ತಿಗೆ ಹಿಂದಿರುಗಿಸಬಹುದು.

(3) ಕಾರ್ಯನಿರ್ವಾಹಕ ಪರಿಷತ್ತು ರಚಿಸಿದ ಎಲ್ಲ ಪರ್ಯಾದೇಶಗಳು, ಅದು ನಿರ್ದೇಶಿಸಬಹುದಾದಂಥ ದಿನಾಂಕದಿಂದ ಜಾರಿಯಲ್ಲಿ ಬರತಕ್ಕದ್ದು. ಪ್ರತಿಯೊಂದು ಪರ್ಯಾದೇಶವನ್ನು ಕುಲಾಧಿಪತಿಯವರ ಪೂರ್ವಾನುಮೋದನೆಯೊಡನೆ ರಚಿಸತಕ್ಕದ್ದು:

ಪರಂತು, ರಾಜ್ಯ ಸಂಚಿತನಿಧಿಯಿಂದ ವೆಚ್ಚವನ್ನು ಪ್ರಸ್ತಾವಿಸುವ ಪರ್ಯಾದೇಶಗಳ ಸಂಬಂಧದಲ್ಲಿ, ಕುಲಾಧಿಪತಿಯವರು ತಮ್ಮ ಅನುಮೋದನೆಯನ್ನು ನೀಡುವ ಮೊದಲು ರಾಜ್ಯಸರ್ಕಾರದೊಡನೆ ಸಮಾಲೋಚಿಸತಕ್ಕದ್ದು.

(4) ಶೈಕ್ಷಣಿಕ ಪರಿಷತ್ತು ಪ್ರಸ್ತಾವಿಸಿದ ಒಂದು ಪರ್ಯಾದೇಶದ ಕರಡನ್ನು ಕಾರ್ಯನಿರ್ವಾಹಕ ಪರಿಷತ್ತು ಸಭೆಯು ತಿರಸ್ಕರಿಸಿದಲ್ಲಿ, ಶೈಕ್ಷಣಿಕ ಪರಿಷತ್ತು, ಕುಲಾಧಿಪತಿಯವರಿಗೆ ಮೇಲ್ಮನವಿ ಮಾಡಿಕೊಳ್ಳಬಹುದು.

(5) ಕುಲಾಧಿಪತಿಯವರು, ಕಾರ್ಯನಿರ್ವಾಹಕ ಪರಿಷತ್ತಿನ ಟೀಕೆಟಿಪ್ಪಣಿಗಳನ್ನು ಪಡೆದ ತರುವಾಯ, ಮೇಲ್ಮನವಿಯನ್ನು ತಿರಸ್ಕರಿಸಬಹುದು ಇಲ್ಲವೇ ಶೈಕ್ಷಣಿಕ ಪರಿಷತ್ತು ಪ್ರಸ್ತಾವಿಸಿದಂತೆ ಪರ್ಯಾದೇಶವನ್ನು ಅನುಮೋದಿಸಬಹುದು. ಅನಂತರ ಪರ್ಯಾದೇಶವನ್ನು ಕಾರ್ಯನಿರ್ವಾಹಕ ಪರಿಷತ್ತು ರಚಿಸಿದ್ದರೆ ಹೇಗೋ ಹಾಗೆ ಅದು ಪರಿಣಾಮಕಾರಿಯಾಗಿರತಕ್ಕದ್ದು.

**58. ನಿಯಮಗಳು.-** (1) ಕಾರ್ಯನಿರ್ವಾಹಕ ಪರಿಷತ್ತು ಈ ಅಧಿನಿಯಮ, ವಿನಿಯಮಗಳು ಪರ್ಯಾದೇಶಗಳಿಗೆ ಸುಸಂಗತವಾದ ನಿಯಮಗಳನ್ನು ರಚಿಸಬಹುದು.

(2) ನಿಯಮಗಳು,-

(ಎ) ಪ್ರತಿಯೊಂದು ಪ್ರಾಧಿಕಾರದ ಸದಸ್ಯರಿಗೆ, ಸಭೆಗಳ ದಿನಾಂಕ ಮತ್ತು ಆ ಸಭೆಗಳಲ್ಲಿ ನಡೆಸಬೇಕಾದ ವ್ಯವಹಾರದ ಬಗ್ಗೆ ನೋಟೀಸನ್ನು ಕೊಡುವುದು ಮತ್ತು ಆ ಸಭೆಗಳ ನಡವಳಿಗಳ ದಾಖಲೆಯನ್ನು ಇಡುವುದು;

(ಬಿ)ಸಭೆಗಳಲ್ಲಿ ಅನುಸರಿಸಬೇಕಾದ ಪ್ರಕ್ರಿಯೆ ಮತ್ತು ಸಭೆಗಳ ಕೋರಂಗಾಗಿ ಅಗತ್ಯವಿರುವ ಸದಸ್ಯರ ಸಂಖ್ಯೆ; ಮತ್ತು

(ಸಿ) ಅಂಥ ಪ್ರಾಧಿಕಾರಕ್ಕೆ ಮಾತ್ರವೇ ಸಂಬಂಧಿಸಿದ ಮತ್ತು ಈ ಅಧಿನಿಯಮ ಅಥವಾ ವಿನಿಯಮಗಳ ಮೂಲಕ ಉಪಬಂಧಿಸದೆ ಇರುವ ಎಲ್ಲ ವಿಷಯಗಳು,

- ಇವುಗಳಿಗಾಗಿ ಉಪಬಂಧಿಸಬಹುದು.

(3) ಈ ಪ್ರಕರಣದ ಮೇರೆಗೆ ರಚಿತವಾದ ಪ್ರತಿಯೊಂದು ನಿಯಮವು, ಕಾರ್ಯನಿರ್ವಾಹಕ ಪರಿಷತ್ತು ಅನುಮೋದಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

## ಅಧ್ಯಾಯ – VI

## ಹಣಕಾಸು ಮತ್ತು ಲೆಕ್ಕಪತ್ರಗಳು

**59. ವಿಶ್ವವಿದ್ಯಾಲಯದ ನಿಧಿಗಳು.–** (1) ವಿಶ್ವವಿದ್ಯಾಲಯಕ್ಕಾಗಿ,–

(ಎ) ರಾಜ್ಯ ಸರ್ಕಾರವು ಮಾಡುವ ಯಾವುದೇ ವಂತಿಗೆ ಅಥವಾ ಅನುದಾನ;

(ಬಿ) ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಕೇಂದ್ರ ಸರ್ಕಾರವು ಮಾಡುವ ಯಾವುದೇ ವಂತಿಗೆ ಅಥವಾ ಅನುದಾನ;

(ಸಿ) ಖಾಸಗಿ ವ್ಯಕ್ತಿಗಳು ಅಥವಾ ಸಂಸ್ಥೆಗಳು ಅಥವಾ ವಿದೇಶಿ ಏಜೆನ್ಸಿಗಳು ನೀಡುವ ಯಾವುದೇ ಉತ್ತರದಾನ, ದೇಣಿಗೆಗಳು ದತ್ತಿಗಳು ಅಥವಾ ಇತರ ಅನುದಾನಗಳು;

(ಡಿ) ಶುಲ್ಕಗಳು ಮತ್ತು ಚಾರ್ಜುಗಳಿಂದ ವಿಶ್ವವಿದ್ಯಾಲಯವು ಸ್ವೀಕರಿಸಿದ ಆದಾಯ; ಮತ್ತು

(ಇ) ಇತರ ಯಾವುದೇ ಮೂಲಗಳಿಂದ ಸ್ವೀಕರಿಸಿದ ಮೊತ್ತಗಳು.

–ಇವುಗಳನ್ನು ಒಳಗೊಂಡ ಒಂದು ವಿಶ್ವವಿದ್ಯಾಲಯ ನಿಧಿಯನ್ನು ಹೊಂದಿರತಕ್ಕದ್ದು.

(2) ಸದರಿ ನಿಧಿಯಲ್ಲಿನ ಮೊಬಲಗನ್ನು, ಕಾರ್ಯನಿರ್ವಾಹಕ ಪರಿಷತ್ ತೀರ್ಮಾನಿಸಿದಂತೆ, ಭಾರತೀಯ ರಿಜರ್ವ್ ಬ್ಯಾಂಕ್ ಅಧಿನಿಯಮ 1934 ರಲ್ಲಿ ಪರಿಭಾಷಿಸಿದಂತ ರಾಷ್ಟ್ರೀಕೃತ ಅಥವಾ ಅನುಸೂಚಿತ ಬ್ಯಾಂಕ್‌ನಲ್ಲಿ ಅಥವಾ ಬ್ಯಾಂಕಿಂಗ್ ಕಂಪನಿಗಳ (ಉದ್ಯಮದ ಆರ್ಜನೆ ಮತ್ತು ಹಸ್ತಾಂತರ) ಅಧಿನಿಯಮ 1970 ಮತ್ತು 1980 ರಡಿ ರಚಿತವಾಗಿರುವ ಸಂವಾದಿಯಾದ ಹೊಸ ಬ್ಯಾಂಕ್‌ನಲ್ಲಿ ಇಡತಕ್ಕದ್ದು ಅಥವಾ ಭಾರತ ನ್ಯಾಸಗಳ ಅಧಿನಿಯಮ, 1982ರಲ್ಲಿ ಅಧಿಕೃತಗೊಳಿಸಿದ ಭದ್ರತಾ ಪತ್ರಗಳಲ್ಲಿ ಹೂಡಿಕೆ ಮಾಡಬಹುದಾಗಿದೆ.

(3) ಸದರಿ ನಿಧಿಯನ್ನು ವಿಶ್ವವಿದ್ಯಾಲಯದ ಅಂಥ ಉದ್ದೇಶಕ್ಕಾಗಿ ಮತ್ತು ವಿನಿಯಮಗಳಲ್ಲಿ ನಿಯಮಿಸಬಹುದಾದಂಥ ವಿಧಾನದಲ್ಲಿ ವಿನಿಯೋಗಿಸಬಹುದು.

**60. ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಕಾರ್ಯನಿರ್ವಾಹಕ ಪರಿಷತ್ತಿನ ನಿರ್ದೇಶನಗಳಡಿಯಲ್ಲಿ ಸಿದ್ಧಪಡಿಸತಕ್ಕದ್ದು.

(2) ವಿಶ್ವವಿದ್ಯಾಲಯದ ಲೆಕ್ಕಪತ್ರಗಳನ್ನು ಕನಿಷ್ಠ ವರ್ಷಕ್ಕೆ ಒಂದು ಬಾರಿ ಕಾರ್ಯನಿರ್ವಾಹಕ ಪರಿಷತ್ತು ನೇಮಿಸಿದ ಲೆಕ್ಕ ಪರಿಶೋಧಕರಿಂದ ಲೆಕ ಪರಿಶೋಧನೆ ಮಾಡಿಸತಕ್ಕದ್ದು:

ಪರಂತು, ವಿಶ್ವವಿದ್ಯಾಲಯದ ಲೆಕ್ಕಪತ್ರಗಳನ್ನು, ಅದು ನಿರ್ವಹಿಸುತ್ತಿರುವ ಸಂಸ್ಥೆಗಳಿಗೂ ಸೇರಿದಂತೆ, ಪರಿಶೋಧನೆಯನ್ನು ರಾಜ್ಯ ಸರ್ಕಾರವು, ಅವಶ್ಯವೆಂದು ಪರಿಗಣಿಸಿದಾಗಲೆಲ್ಲ, ಅದು ನಿರ್ದಿಷ್ಟಪಡಿಸಬಹುದಾದಂತಹ ಲೆಕ್ಕ ಪರಿಶೋಧಕರಿಂದ ಪರಿಶೋಧಿಸಲು ನಿರ್ದೇಶಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.

ಮತ್ತೂ ಪರಂತು, ಬಾಹ್ಯ ಏಜೆನ್ಸಿಗಳಿಂದ ಹಣಕಾಸು ನೀಡಿದ ಪ್ರಕರಣದಲ್ಲಿ ಸರ್ಕಾರದ ಲೆಕ್ಕಪರಿಶೋಧಕರಿಂದ ಲೆಕ್ಕಪರಿಶೋಧನೆಗೆ ಒಳಪಟ್ಟು, ಕಾರ್ಯನಿರ್ವಾಹಕ ಪರಿಷತ್ತು ಅನುಮೋದಿಸಿದ ಪಟ್ಟಿಗಳಿಂದ ಆಯ್ದ ಖಾಸಗಿ ಲೆಕ್ಕಪರಿಶೋಧಕರಿಂದ ಲೆಕ್ಕಪರಿಶೋಧನೆಯನ್ನು ಮಾಡಿಸತಕ್ಕದ್ದು.

(ii) ರೈತನ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿರುವಾಗ ಮತ್ತು ನಷ್ಟ ಪರಿಹಾರ ಮೊತ್ತದಿಂದ ರೈತನು ಕೃಷಿ ಅಥವಾ ಕೃಷಿಯೇತರ ಭೂಮಿಯನ್ನು ಖರೀದಿಸಿದಾಗ; ಮತ್ತು

(iii) ರೈತನ ಅಥವಾ ಇತರರ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿರುವಾಗ ಮತ್ತು ನಷ್ಟಪರಿಹಾರ ಮೊತ್ತದಿಂದ ರೈತನು ಅಥವಾ ಇತರ ವ್ಯಕ್ತಿಯು ಕೃಷಿ ಅಥವಾ ಕೃಷಿಯೇತರ ಭೂಮಿಯನ್ನು ಖರೀದಿಸಿದಾಗ;

ಮೇಲಿನ ವಿನಾಯಿತಿಯ ಉದ್ದೇಶಕ್ಕಾಗಿ ಆ ಪರಿಣಾಮವಾಗಿ ಜಿಲ್ಲಾಧಿಕಾರಿ ಅಥವಾ ಸಂಬಂಧಿಸಿದ ಪ್ರಾಧಿಕಾರಿಯು ಸ್ವಾಧೀನಪಡಿಸಿಕೊಂಡ ಭೂಮಿಯ ವಿವರಗಳು ಮತ್ತು ನೀಡಲಾದ ನಷ್ಟ ಪರಿಹಾರದ ವಿವರಗಳನ್ನು ಒಳಗೊಂಡಂತೆ ಹೊರಡಿಸಿದ ಪ್ರಮಾಣಪತ್ರವೊಂದನ್ನು ಒದಗಿಸಬೇಕಾಗುವುದು."

**3. ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಅನುಸೂಚಿಯಲ್ಲಿ,–

(ಎ) 5ನೇ ಅನುಚ್ಛೇದದಲ್ಲಿ,–

(ಎ) (ಇ) ಖಂಡದಲ್ಲಿನ (i)ನೇ ಉಪಖಂಡದ (2)ನೇ ಕಾಲಂನಲ್ಲಿ "ಕೊಡದೆ" ಎಂಬ ಪದಕ್ಕೆ "ಕೊಡುವ ಮೊದಲು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) (ಜಿ) ಖಂಡದಲ್ಲಿನ (i)ನೇ ಉಪಖಂಡದ (3)ನೇ ಕಾಲಂನಲ್ಲಿ "ಶೇಕಡಾ ಎರಡು" ಎಂಬ ಪದಗಳಿಗೆ "ಶೇಕಡಾ ಮೂರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಸಿ) (iಇ) ಖಂಡ ಮತ್ತು ಅದರಲ್ಲಿನ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

| "(i–ಇ) | ಚಿಟ್ ಫಂಡ್ ಅಧಿನಿಯಮ, 1982ರ 6ನೇ ಪ್ರಕರಣದ ಅಡಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಲಿಖಿತವಾಗಿ ಚಿಟ್ ಒಪ್ಪಂದವನ್ನು ಮಾಡಿಕೊಂಡಲ್ಲಿ.– | |
|---|---|---|
| | (i) ಚಿಟ್ ಮೌಲ್ಯವು ಒಂದು ಲಕ್ಷ ರೂಪಾಯಿಗಳನ್ನು ಮೀರದಿದ್ದಲ್ಲಿ | ಒಂದು ನೂರು ರೂಪಾಯಿಗಳು |
| | (ii) ಚಿಟ್ ಮೌಲ್ಯವು ಒಂದು ಲಕ್ಷ ರೂಪಾಯಿಗಳನ್ನು ಮೀರಿದ್ದಲ್ಲಿ | ಒಂದು ನೂರು ರೂಪಾಯಿಗಳು ಜೊತೆಗೆ ಒಂದು ಲಕ್ಷ ರೂಪಾಯಿಗಳನ್ನು ಮೀರಿದ ಪ್ರತಿ ಒಂದು ಲಕ್ಷ ರೂಪಾಯಿ ಅಥವಾ ಅದರ ಭಾಗಕ್ಕೆ ಐವತ್ತು ರೂಪಾಯಿಗಳು." |

(ಬಿ) ಅನುಚ್ಛೇದ 20ರಲ್ಲಿ,–

(i) (4)ನೇ ಖಂಡದಲ್ಲಿ,–

(ಎ) (i)ನೇ ಉಪಖಂಡದ (3)ನೇ ಕಾಲಂನಲ್ಲಿ "ಶೇಕಡಾ ಎರಡರಷ್ಟು" ಎಂಬ ಪದಗಳಿಗೆ "ಶೇಕಡಾ ಮೂರರಷ್ಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) (ii)ನೇ ಉಪಖಂಡದ (3)ನೇ ಕಾಲಂನಲ್ಲಿ "ಶೇಕಡಾ ಎರಡರಷ್ಟು" ಎಂಬ ಪದಗಳಿಗೆ "ಶೇಕಡಾ ಮೂರರಷ್ಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (5)ನೇ ಖಂಡದಲ್ಲಿನ (i)ನೇ ಉಪಖಂಡದಲ್ಲಿ (3)ನೇ ಕಾಲಂನಲ್ಲಿ "ಶೇಕಡಾ ಎರಡು" ಎಂಬ ಪದಗಳಿಗೆ "ಶೇಕಡಾ ಮೂರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(iii) (7)ನೇ ಖಂಡದಲ್ಲಿನ (3)ನೇ ಕಾಲಂನಲ್ಲಿ,–

(ಎ) "1%" ಎಂಬ ಅಂಕಿಗೆ " ಶೇಕಡಾ ಮೂರರಷ್ಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ)ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, 41ನೇ ಅನುಚ್ಛೇದದ (ಇಸಿ) ಖಂಡದ ಅಡಿಯಲ್ಲಿ ಅದೇ ಸ್ವತ್ತಿನ ಸಂಬಂಧದಲ್ಲಿ ಮತ್ತು ಅದೇ ಪಕ್ಷಕಾರರ ಮೂಲಕ ಮತ್ತು ಅವರ ನಡುವೆ ಬರೆಯಲಾದ ಮುಖ್ತಾರನಾಮೆಯ ಮೇಲೆ ಸೂಕ್ತ ಸುಂಕವನ್ನು ಸಂದಾಯ ಮಾಡಿದ್ದಲ್ಲಿ, ಅನುಚ್ಛೇದ 20(7)ರ ಅಡಿಯಲ್ಲಿಯ ಹಸ್ತಾಂತರಣದ ಮೇಲೆ ಸಂದಾಯ ಮಾಡಬಹುದಾದ ಸುಂಕವು ಎರಡು ನೂರು ರೂಪಾಯಿಗಳನ್ನು ಮೀರತಕ್ಕದ್ದಲ್ಲ."

(ಸಿ) 28ನೇ ಅನುಚ್ಛೇದದ (ಬಿ) ಖಂಡದಲ್ಲಿನ (3)ನೇ ಕಾಲಂನಲ್ಲಿ "ಒಂದು ಸಾವಿರ ರೂಪಾಯಿಗಳು" ಎಂಬ ಪದಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(i) ಸ್ವತ್ತು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಥವಾ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಥವಾ ಮಹಾನಗರ ಪಾಲಿಕೆಯ ಮಿತಿಯೊಳಗೆ ಇದ್ದರೆ ------ ಐದು ಸಾವಿರ ರೂಪಾಯಿಗಳು;

(ii) ಸ್ವತ್ತು ನಗರ ಅಥವಾ ಪುರಸಭೆ ಅಥವಾ ಪಟ್ಟಣ ಪಂಚಾಯತ್ ಪ್ರದೇಶದ ಮಿತಿಗಳಲ್ಲಿ ಇದ್ದರೆ ------ ಮೂರು ಸಾವಿರ ರೂಪಾಯಿಗಳು;

(iii) ಸ್ವತ್ತು (i)ನೇ ಮತ್ತು (ii)ನೇ ಬಾಬುಗಳಲ್ಲಿ ನಿರ್ದಿಷ್ಟಪಡಿಸಿದ ಮಿತಿಗಳ ಹೊರತಾಗಿ ಇತರ ಮಿತಿಗಳಲ್ಲಿ ಇದ್ದರೆ ------ ಒಂದು ಸಾವಿರ ರೂಪಾಯಿಗಳು;

ಪರಂತು, ಮೇಲೆ ನಮೂದಿಸಿದ (i), (ii) ಮತ್ತು (iii)ನೇ ಬಾಬುಗಳ ಯಾವುದೇ ಒಟ್ಟುಗೂಡಿದ ಮಿತಿಗಳಲ್ಲಿ ಸ್ವತ್ತು ಇದ್ದರೆ, ಸಂದಾಯ ಮಾಡಬಹುದಾದ ಸುಂಕವು ಮೇಲಿನ (i), (ii) ಮತ್ತು (iii)ನೇ ಬಾಬುಗಳಲ್ಲಿ ನಮೂದಿಸಿದ ಸುಂಕಗಳ ಗರಿಷ್ಠವಾಗಿರತಕ್ಕದ್ದು."

**(ಡಿ)** 30ನೇ ಅನುಚ್ಛೇದದ (1)ನೇ ಖಂಡದ (vi)ನೇ ಉಪಖಂಡದಲ್ಲಿನ (3)ನೇ ಕಾಲಂನಲ್ಲಿರುವ ಎರಡನೇ ಪರಂತುಕದಲ್ಲಿ "ಒಂದು ಸಾವಿರ ರೂಪಾಯಿಗಳಾಗಿರತಕ್ಕದ್ದು" ಎಂಬ ಪದಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(i) ಸ್ವತ್ತು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಥವಾ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಥವಾ ಮಹಾನಗರ ಪಾಲಿಕೆಯ ಮಿತಿಯೊಳಗೆ ಇದ್ದರೆ ------ ಐದು ಸಾವಿರ ರೂಪಾಯಿಗಳು;

(ii) ಸ್ವತ್ತು ನಗರ ಅಥವಾ ಪುರಸಭೆ ಅಥವಾ ಪಟ್ಟಣ ಪಂಚಾಯತ್ ಪ್ರದೇಶದ ಮಿತಿಗಳಲ್ಲಿ
ಇದ್ದರೆ ------ ಮೂರು ಸಾವಿರ ರೂಪಾಯಿಗಳು;

(iii) ಸ್ವತ್ತು (i)ನೇ ಮತ್ತು (ii)ನೇ ಬಾಬುಗಳಲ್ಲಿ ನಿರ್ದಿಷ್ಟಪಡಿಸಿ ಮಿತಿಗಳ ಹೊರತಾಗಿ ಇತರ ಮಿತಿಗಳಲ್ಲಿ ಇದ್ದರೆ ------ ಒಂದು ಸಾವಿರ ರೂಪಾಯಿಗಳು;

ಪರಂತು, ಮೇಲೆ ನಮೂದಿಸಿದ (i), (ii) ಮತ್ತು (iii)ನೇ ಬಾಬುಗಳ ಯಾವುದೇ ಒಟ್ಟುಗೂಡಿದ ಮಿತಿಗಳಲ್ಲಿ ಸ್ವತ್ತು ಇದ್ದರೆ, ಸಂದಾಯ ಮಾಡಬಹುದಾದ ಸುಂಕವು ಮೇಲಿನ (i), (ii) ಮತ್ತು (iii)ನೇ ಬಾಬುಗಳಲ್ಲಿ ವಿವರಿಸಿದ ಸುಂಕಗಳ ಗರಿಷ್ಠವಾಗಿರತಕ್ಕದ್ದು."

(ಇ) 40ನೇ ಅನುಚ್ಛೇದದಲ್ಲಿ,-

(ಎ) **ಎ** ಖಂಡದ ಮತ್ತು ಅದರ (2) ಮತ್ತು (3)ನೇ ಕಾಲಂನಲ್ಲಿನ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"

| ಎ | ರಚನೆಯ ಲಿಖಿತ ಪತ್ರ | ಎರಡು ಸಾವಿರ ರೂಪಾಯಿಗಳು |
|---|---|---|

"

(ಬಿ) **ಬಿ** ಖಂಡದ (ಎ) ಉಪಖಂಡದಲ್ಲಿನ (3)ನೇ ಕಾಲಂನಲ್ಲಿ "ಹಸ್ತಾಂತರಣಕ್ಕೆ (ಸಂ.20) ವಿಧಿಸಬಹುದಾದ ಅಷ್ಟೇ ಶುಲ್ಕ" ಎಂಬ ಪದಗಳು ಮತ್ತು ಅಂಕಿಗಳಿಗೆ "ಶೇಕಡಾ ಮೂರರಷ್ಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಸಿ) ಸಿ ಖಂಡದ (ಎ) ಉಪಖಂಡದಲ್ಲಿನ (3)ನೇ ಕಾಲಂನಲ್ಲಿ "ಬೆಲೆಗೆ ಹಸ್ತಾಂತರಣಕ್ಕೆ (ಸಂ.20) ವಿಧಿಸಬಹುದಾದ ಅಷ್ಟೇ ಸುಂಕ" ಎಂಬ ಪದಗಳು ಮತ್ತು ಅಂಕಿಗಳಿಗೆ "ಬೆಲೆಯ ಮೇಲೆ ಶೇಕಡಾ ಮೂರರಷ್ಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**(ಎಫ್)** 40ಎ ಅನುಚ್ಛೇದಲ್ಲಿ,-

(ಎ) **ಎ** ಖಂಡದ (ಬಿ) ಉಪಖಂಡದಲ್ಲಿನ (3)ನೇ ಕಾಲಂನಲ್ಲಿ "ಐದು ನೂರು ರೂಪಾಯಿಗಳು" ಎಂಬ ಪದಗಳಿಗೆ "ಒಂದು ಸಾವಿರದ ರೂಪಾಯಿಗಳು ಜೊತೆಗೆ ಬಂಡವಾಳ ಮೊತ್ತವು ಹತ್ತು ಲಕ್ಷ ರೂಪಾಯಿಗಳಿಗೂ ಮೀರಿದಲ್ಲಿ ಗರಿಷ್ಠ ಹತ್ತು ಲಕ್ಷ ರೂಪಾಯಿಗಳಿಗೆ ಒಳಪಟ್ಟು ಪ್ರತಿ ಐದು ಲಕ್ಷ ರೂಪಾಯಿಗಳು ಅಥವಾ ಅದರ ಭಾಗಕ್ಕೆ ಐದು ನೂರು ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) **ಬಿ** ಖಂಡದಲ್ಲಿನ (3)ನೇ ಕಾಲಂನಲ್ಲಿ "ಶೇಕಡ ಎರಡು" ಎಂಬ ಪದಗಳಿಗೆ "ಶೇಕಡಾ ಮೂರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**(ಜಿ)** 41ನೇ ಅನುಚ್ಛೇದದಲ್ಲಿ (ಇಬಿ) ಖಂಡದ ತರುವಾಯ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"

| (ಇಸಿ) ಕರ್ನಾಟಕ ರಾಜ್ಯದಲ್ಲಿರುವ ವರ್ಗಾಯಿಸಬಹುದಾದ ಅಭಿವೃದ್ಧಿ ಹಕ್ಕುಗಳಿಗೆ ಸಂಬಂದಪಟ್ಟ ಸ್ಥಿರ ಸ್ವತ್ತನ್ನು ಮಾರುವುದಕ್ಕೆ ಸಂಬಂಧಿಸಿದಂತೆ ಪ್ರಾಧಿಕೃತನಾದ ವ್ಯಕ್ತಿಯು, ಬರೆದು ಕೊಡುವವನ ತಂದೆ, ತಾಯಿ, ಪತ್ನಿ, ಅಥವಾ ಪತಿ, ಗಂಡು ಮಕ್ಕಳು, ಹೆಣ್ಣು ಮಕ್ಕಳು, ಸಹೋದರರು, ಸಹೋದರಿ ಯರನ್ನು ಹೊರತುಪಡಿಸಿ ಇತರ ವ್ಯಕ್ತಿಗೆ ನೀಡಿದಾಗ | ಮುಖ್ತ್ಯಾರುನಾಮೆಯ ವಸ್ತು ವಿಷಯವಾದ ಸ್ವತ್ತಿನ ಮಾರುಕಟ್ಟೆ ಮೌಲ್ಯದ ಮೇಲೆ 20 (7)ನೇ ಅನುಚ್ಛೇದದ ಅಡಿಯಲ್ಲಿ ಹಸ್ತಾಂತರ ಪತ್ರಕ್ಕೆ ವಿಧಿಸುವಷ್ಟೇ ಶುಲ್ಕ. |
|---|---|

"

(**ಹೆಚ್**) 45ನೇ ಅನುಚ್ಛೇದದ (ಬಿ) ಖಂಡದಲ್ಲಿನ (3)ನೇ ಕಾಲಂನಲ್ಲಿ "ಒಂದು ಸಾವಿರ ರೂಪಾಯಿಗಳು" ಎಂಬ ಪದಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(i) ಸ್ವತ್ತು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಥವಾ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಥವಾ ಮಹಾನಗರಪಾಲಿಕೆಯ ಮಿತಿಯೊಳಗೆ ಇದ್ದರೆ ----- ಐದು ಸಾವಿರ ರೂಪಾಯಿಗಳು;

(ii) ಸ್ವತ್ತು ನಗರ ಅಥವಾ ಪುರಸಭೆ ಅಥವಾ ಪಟ್ಟಣ ಪಂಚಾಯತ್ ಪ್ರದೇಶದ ಮಿತಿಗಳಲ್ಲಿ ಇದ್ದರೆ ----- ಮೂರು ಸಾವಿರ ರೂಪಾಯಿಗಳು;

(iii) ಸ್ವತ್ತು (i)ನೇ ಮತ್ತು (ii)ನೇ ಬಾಬುಗಳಲ್ಲಿ ನಿರ್ದಿಷ್ಟಪಡಿಸಿ ಮಿತಿಗಳ ಹೊರತಾಗಿ ಇತರ ಮಿತಿಗಳಲ್ಲಿ ಇದ್ದರೆ ----- ಒಂದು ಸಾವಿರ ರೂಪಾಯಿಗಳು;

ಪರಂತು, ಮೇಲೆ ನಮೂದಿಸಿದ (i), (ii) ಮತ್ತು (iii)ನೇ ಬಾಬುಗಳ ಯಾವುದೇ ಒಟ್ಟುಗೂಡಿದ ಮಿತಿಗಳಲ್ಲಿ ಸ್ವತ್ತು ಇದ್ದರೆ, ಸಂದಾಯ ಮಾಡಬಹುದಾದ ಸುಂಕವು ಮೇಲಿನ (i), (ii) ಮತ್ತು (iii)ನೇ ಬಾಬುಗಳಲ್ಲಿ ನಮೂದಿಸಿದ ಸುಂಕಗಳ ಗರಿಷ್ಠವಾಗಿರತಕ್ಕದ್ದು."

(**ಐ**) 48ನೇ ಅನುಚ್ಛೇದದ ಎ ಖಂಡದಲ್ಲಿನ (ii)ನೇ ಉಪಖಂಡದ (3)ನೇ ಕಾಲಂನಲ್ಲಿ "ಒಂದು ಸಾವಿರ ರೂಪಾಯಿಗಳು" ಎಂಬ ಪದಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(i) ಸ್ವತ್ತು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಥವಾ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಥವಾ ಮಹಾನಗರ ಪಾಲಿಕೆಯ ಮಿತಿಯೊಳಗೆ ಇದ್ದರೆ ----- ಐದು ಸಾವಿರ ರೂಪಾಯಿಗಳು;

(ii) ಸ್ವತ್ತು ನಗರ ಅಥವಾ ಪುರಸಭೆ ಅಥವಾ ಪಟ್ಟಣ ಪಂಚಾಯತ್ ಪ್ರದೇಶದ ಮಿತಿಗಳಲ್ಲಿ ಇದ್ದರೆ ----- ಮೂರು ಸಾವಿರ ರೂಪಾಯಿಗಳು;

(iii) ಸ್ವತ್ತು (i)ನೇ ಮತ್ತು (ii)ನೇ ಬಾಬುಗಳಲ್ಲಿ ನಿರ್ದಿಷ್ಟಪಡಿಸಿ ಮಿತಿಗಳ ಹೊರತಾಗಿ ಇತರ ಮಿತಿಗಳಲ್ಲಿ ಇದ್ದರೆ ----- ಒಂದು ಸಾವಿರ ರೂಪಾಯಿಗಳು;

ಪರಂತು, ಮೇಲೆ ನಮೂದಿಸಿದ (i), (ii) ಮತ್ತು (iii)ನೇ ಬಾಬುಗಳ ಯಾವುದೇ ಒಟ್ಟುಗೂಡಿದ ಮಿತಿಗಳಲ್ಲಿ ಸ್ವತ್ತು ಇದ್ದರೆ, ಸಂದಾಯ ಮಾಡಬಹುದಾದ ಸುಂಕವು ಮೇಲಿನ (i), (ii) ಮತ್ತು (iii)ನೇ ಬಾಬುಗಳಲ್ಲಿ ನಮೂದಿಸಿದ ಸುಂಕಗಳ ಗರಿಷ್ಠವಾಗಿರತಕ್ಕದ್ದು."

**4. ಸಿಂಧುತ್ವ.–** ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಅಸ್ತಿತ್ವದಲ್ಲಿದ್ದ ಮೂಲ ಅಧಿನಿಯಮದ 9ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಅಧಿಸೂಚನೆ ಸಂಖ್ಯೆ: ಆರ್‌ಡಿ 71 ಮುನೋಮು 2014, ದಿನಾಂಕ:10.02.2016ರ ಅಡಿಯಲ್ಲಿ ಮಂಜೂರು ಮಾಡಿದ ಸ್ಟಾಂಪು ಶುಲ್ಕದ ಮಾಫಿ ಅಥವಾ ವಿನಾಯಿತಿಯು, ಈ ಅಧಿನಿಯಮದ ಮೂಲಕ ತಿದ್ದುಪಡಿಯಾದಂತೆ 9ನೇ ಪ್ರಕರಣದ ಅಡಿಯಲ್ಲಿ ಮಂಜೂರಾಗಿದೆ ಹಾಗೂ ಸಿಂಧುವಾಗಿದೆ ಮತ್ತು ಪರಿಣಾಮಕಾರಿಯಾಗಿದೆ ಎಂದು ಭಾವಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2016-17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾಡಿರುವ ಪ್ರಸ್ತಾವಗಳನ್ನು ಜಾರಿಗೊಳಿಸುವುದಕ್ಕಾಗಿ ಮತ್ತು ತತ್ಪರಿಣಾಮದ ತಿದ್ದುಪಡಿಗಳನ್ನು ಮಾಡಲು ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ, 34) ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ವಿ. ಶ್ರೀನಿವಾಸ ಪ್ರಸಾದ್**
ಕಂದಾಯ ಸಚಿವರು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ

## ಅನುಬಂಧ

**ಕರ್ನಾಟಕ ಸ್ಟಾಂಪು ಅಧಿನಿಯಮ 1957ರ (1957ರ ಕರ್ನಾಟಕ ಅಧಿನಿಯಮ 34) ಉದ್ಧೃತ ಭಾಗ**

xx xx xx

**9ನೇ ಪ್ರಕರಣ.–** (1) (ಎ) xx xx xx

ಮತ್ತು ಪರಂತು, ರಾಜ್ಯ ಸರ್ಕಾರವು, ಸಾರ್ವಜನಿಕ ಹಿತದೃಷ್ಟಿಯಿಂದ, ಅಧಿಸೂಚನೆಯ ಮೂಲಕ, ಅದರಲ್ಲಿ ನಿರ್ದಿಷ್ಟಪಡಿಸಿದ, ಸರ್ಕಾರಿ ಆದೇಶ ಸಂಖ್ಯೆ ಸಿಐ 58 ಎಸ್‌ಪಿಐ 2013, ದಿನಾಂಕ 01–10–2014 ರಲ್ಲಿ ನಿರ್ದಿಷ್ಟಪಡಿಸಿದ, ಕರ್ನಾಟಕ ಕೈಗಾರಿಕಾ ನೀತಿ 2014–19ರಲ್ಲಿ ಪರಿಭಾಷಿಸಿದಂತೆ ವಿಸ್ತರಣೆ, ಆಧುನೀಕರಣ ಮತ್ತು ಬದಲಾವಣೆಗಳ ಅಥವಾ ಸದರಿ ನೀತಿಯಲ್ಲಿ ಪರಿಭಾಷಿಸಿದಂತೆ ಅಂಥ ಪ್ರಧಾನ ಕ್ಷೇತ್ರದ ಯಾವುದೇ ಅಂಥ ಪ್ರಮುಖ ಯೋಜನೆಗಳ (ಕೀ ಪ್ರಾಜೆಕ್ಟ್) ಅಥವಾ ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂತೆ, ಯೋಜನೆಗಳನ್ನೂ ಒಳಗೊಂಡಂತೆ ಹೊಸ ಮತ್ತು ಪ್ರಸ್ತುತ ಇರುವ ಮೈಕ್ರೋ, ಸಣ್ಣ, ಮಧ್ಯಮ ಉದ್ಯಮಗಳು (ಎಮ್‌ಎಸ್‌ಎಮ್‌ಇ), ದೊಡ್ಡ, ಮೆಗಾ, ಅಲ್ಟ್ರಾ ಮೆಗಾ, ಸೂಪರ್ ಮೆಗಾ ಉದ್ಯಮಗಳು ಬರೆದುಕೊಟ್ಟ ಯಾವುದೇ ಲಿಖಿತದ ಮೇಲೆ ಸಂದಾಯವಾಗುವ ಸ್ಟಾಂಪು ಶುಲ್ಕವನ್ನು 2019ರ ಸೆಪ್ಟೆಂಬರ್ 30ರವರೆಗೆ ಕಡಿಮೆಗೊಳಿಸಬಹುದು ಅಥವಾ ಮಾಫಿ ಮಾಡಬಹುದು.

xx xx xx

**5. ಒಪ್ಪಂದ ಅಥವಾ ಅದರ ದಾಖಲೆಗಳು ಅಥವಾ**

**ಒಪ್ಪಂದದ ವಿವರಣ ಪತ್ರ,–** xx

| | |
|---|---|
| (ಇ) ಸ್ಥಿರ ಸ್ವತ್ತಿನ ಮಾರಾಟಕ್ಕೆ ಸಂಬಂಧಿಸಿರುವಲ್ಲಿ ಕರಾರನ್ನು ಭಾಗಶ:ವಾಗಿ ನಿರ್ವಹಿಸಿರುವಲ್ಲಿ<br>(i) ಹಸ್ತಾಂತರಣರವನ್ನು ಲಿಖಿತದಲ್ಲಿ ಕೊಡದೆ ಸ್ವತ್ತಿನ ಸ್ವಾಧೀನತೆಯನ್ನು ನೀಡಿದ್ದರೆ ಅಥವಾ ನೀಡಲಾಗುವುದೆಂದು ಒಪ್ಪಿಕೊಂಡಿದ್ದರೆ;<br>xx | xx |
| (ಜಿ) ಚರಸ್ವತ್ತಿನ ಮಾರಾಟಕ್ಕೆ ಸಂಬಂಧಿಸಿರುವಲ್ಲಿ,– | |
| (i) ಹಸ್ತಾಂತರಣವನ್ನು ಲಿಖಿತದಲ್ಲಿ ಕೊಡದೆ ಸ್ವತ್ತಿನ ಸ್ವಾಧೀನತೆಯನ್ನು ನೀಡಿದ್ದರೆ ಅಥವಾ ನೀಡಲಾಗುವುದೆಂದು ಒಪ್ಪಿಕೊಂಡಿದ್ದರೆ. | ಪ್ರತಿಫಲದ ಶೇಕಡಾ ಎರಡು ಅಥವಾ ಸ್ವತ್ತಿನ ಮಾರುಕಟ್ಟೆ ಮೌಲ್ಯ ಇವೆರಡರಲ್ಲಿ ಯಾವುದು ಹೆಚ್ಚೋ ಅದು: xx |

| | | |
|---|---|---|
| (i–ಇ) | ಚಿಟ್ ಫಂಡ್ ಅಧಿನಿಯಮ, 1982ರ 6ನೇ ಪ್ರಕರಣದ ಅಡಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಲಿಖಿತವಾಗಿ ಚಿಟ್ ಒಪ್ಪಂದವನ್ನು ಮಾಡಿಕೊಂಡಲ್ಲಿ, ಚಿಟ್ ಮೌಲ್ಯವು,– | |
| | (i)ಒಂದು ಲಕ್ಷ ರೂಪಾಯಿಗಳು ಮೀರದಿದ್ದಲ್ಲಿ; | ಒಂದು ನೂರು ರೂಪಾಯಿಗಳು |
| | (ii)ಒಂದು ಲಕ್ಷ ರೂಪಾಯಿಗಳನ್ನು ಮೀರಿದ್ದು, ಆದರೆ ಐದು ಲಕ್ಷ ರೂಪಾಯಿಗಳು ಮೀರದಿದ್ದಲ್ಲಿ; | ಐದು ನೂರು ರೂಪಾಯಿಗಳು |

| | (iii) ಐದು ಲಕ್ಷ ರೂಪಾಯಿಗಳನ್ನು ಮೀರಿದಲ್ಲಿ, ಪ್ರತಿ ಎರಡು ಲಕ್ಷ ರೂಪಾಯಿಗಳು ಅಥವಾ ಅದರ ಭಾಗಕ್ಕೆ; | ಒಂದು ನೂರು ರೂಪಾಯಿಗಳು |
|---|---|---|

xx xx xx

**ಅನುಚ್ಛೇಧ 20.– xx**

| | | |
|---|---|---|
| | (4) ಕಂಪನಿಗಳ ಅಧಿನಿಯಮ, 1956ರ ಪ್ರಕರಣ 394ರ ಅಡಿಯಲ್ಲಿ ಉಚ್ಚ ನ್ಯಾಯಾಲಯವು ಮಾಡಿದ ಒಂದು ಅದೇಶಕ್ಕೆ ಸಂಬಂಧಪಟ್ಟಿದ್ದರೆ<br>(i)ಮಾತೃ ಕಂಪನಿಯೊಂದಿಗೆ ಪೂರಕ ವಿಲೀನವನ್ನೂ ಒಳಗೊಂಡಂತೆ ಕಂಪನಿಗಳ ವಿಲೀನದ ಸಂಬಂಧದಲ್ಲಿ,<br>(ii)ಕಂಪನಿಯ ಪುನರ್ ನಿರ್ಮಾಣ ಅಥವಾ ಡಿಮರ್ಜರ್‌ನ ಸಂಬಂಧದಲ್ಲಿ,– | ಕರ್ನಾಟಕ ರಾಜ್ಯದಲ್ಲಿರುವ ಮತ್ತು ವರ್ಗಾವಣೆ ಪಡೆದ ಕಂಪನಿಗೆ ವರ್ಗಾಯಿಸಲಾದ ವರ್ಗಾವಣೆ ಮಾಡುವ ಕಂಪನಿಯ ಸ್ವತ್ತಿನ ಮಾರುಕಟ್ಟೆ ಮೌಲ್ಯದ ಮೇಲೆ ಶೇಕಡಾ ಎರಡರಷ್ಟು; ಅಥವಾ<br>xx<br>ಕರ್ನಾಟಕ ರಾಜ್ಯದಲ್ಲಿರುವ ಮತ್ತು ವರ್ಗಾವಣೆ ಪಡೆದ, ಕಂಪನಿಗೆ ವರ್ಗಾಯಿಸಲಾದ ವರ್ಗಾವಣೆ ಮಾಡುವ ಕಂಪನಿಯು ಸ್ವತ್ತಿನ ಮಾರುಕಟ್ಟೆ ಮೌಲ್ಯದ ಮೇಲೆ ಶೇಕಡಾ ಎರಡರಷ್ಟು;<br>xx |
| | (5) ಕೈಗಾರಿಕಾ ಯಂತ್ರಗಳಿಗೆ ಸಂಬಂಧಿಸಿದ ಹಸ್ತಾಂತರಣ ಪತ್ರ<br>(i) ಕೈಗಾರಿಕಾ ಯಂತ್ರಗಳನ್ನು ಚರಾಸ್ತಿಯೆಂದು ಪರಿಗಣಿಸಿದಾಗ<br>(ii) xx | ಪ್ರತಿಫಲದ ಮೌಲ್ಯದ ಶೇಕಡ ಎರಡು ಅಥವಾ ಸ್ವತ್ತಿನ ಮಾರುಕಟ್ಟೆ ಮೌಲ್ಯ ಇವೆರಡರಲ್ಲಿ ಯಾವುದು ಹೆಚ್ಚೋ ಅದು. |
| | (7) ವರ್ಗಾವಣೀಯ ಅಭಿವೃದ್ಧಿ ಹಕ್ಕುಗಳಿಗೆ ಸಂಬಂಧಿಸಿದ ಹಸ್ತಾಂತರಣ ಪತ್ರ | ಹಸ್ತಾಂತರಣದ ವಸ್ತು ವಿಷಯವಾಗಿರುವ ಅಂಥ ವರ್ಗಾವಣೀಯ ಅಭಿವೃದ್ಧಿ ಹಕ್ಕುಗಳಿಗೆ ಅವಕಾಶ ನೀಡುವ ಸಂವಾದಿ ಭಾಗದ ಮಾರುಕಟ್ಟೆ ಮೌಲ್ಯಕ್ಕೆ ಸಮನಾದ ವರ್ಗಾವಣೀಯ ಅಭಿವೃದ್ಧಿ ಹಕ್ಕುಗಳ ಮಾರುಕಟ್ಟೆ ಮೌಲ್ಯ ಅಥವಾ ಅಂಥ ಹಸ್ತಾಂತರಣದ ಪ್ರತಿಫಲ, ಇದರಲ್ಲಿ ಯಾವುದು ಹೆಚ್ಚೋ, ಅದರ ಮೇಲೆ 1%. |

ಅನುಚ್ಛೇಧ 28.– **ದಾನ ಲಿಖಿತ** xx

| (ಬಿ) ದಾನ ಪಡೆಯುವವನು ದಾನಿಯ ಕುಟುಂಬದ ಸದಸ್ಯನಾಗಿದ್ದಲ್ಲಿ | ಒಂದು ಸಾವಿರ ರೂಪಾಯಿಗಳು |
|---|---|

ಅನುಚ್ಛೇಧ 30.– **ಸ್ಥಿರ ಆಸ್ತಿಯ ಗುತ್ತಿಗೆ** xx

| (vi) xx | xx<br>xx<br>ಮತ್ತು ಪರಂತು, ಒಬ್ಬ ವ್ಯಕ್ತಿಗೆ ಸಂಬಂಧಿಸಿದಂತೆ |
|---|---|

| | ಪತ್ನಿ, ಪತಿ, ತಂದೆ, ತಾಯಿ, ಮಗ, ಮಗಳು, ಸಹೋದರ, ಸಹೋದರಿಯ ಹೆಸರಿನಲ್ಲಿ ಬರೆದುಕೊಟ್ಟ ಗೇಣಿಯ ಲಿಖಿತ ಪತ್ರದ ಸಂಬಂಧದಲ್ಲಿ ಸುಂಕವು ಒಂದು ಸಾವಿರ ರೂಪಾಯಿಗಳಾಗಿರತಕ್ಕದ್ದು |
|---|---|

ಅನುಚ್ಛೇಧ 40.– **ಪಾಲುದರಿಕೆ.–**

| **ಎ. ಲಿಖಿತ ಪತ್ರವು** | |
|---|---|
| (ಎ) ಪಾಲುದಾರಿಕೆಯ ಬಂಡವಾಳವು ಐವತ್ತು ಸಾವಿರ ರೂಪಾಯಿಯನ್ನು ಮೀರದಿರುವಾಗ | ಐದು ನೂರು ರೂಪಾಯಿಗಳು |
| (ಬಿ) ಯಾವುದೇ ಇತರ ಸಂದರ್ಭದಲ್ಲಿ | ಎರಡು ಸಾವಿರ ರೂಪಾಯಿಗಳು |
| **ಬಿ.ಪುನಾರಚನೆ** | |
| (ಎ) ಪಾಲುದಾರ ಅಥವಾ ಪಾಲುದಾರರು ಷೇರು ರೂಪದಲ್ಲಿ ಸಲ್ಲಿಸಿದ ಸ್ಥಿರ ಸ್ವತ್ತು ಅವರು ನಿರ್ಗಮಿಸುವ ಸಮಯದಲ್ಲಿ ಫರ್ಮಿನಲ್ಲಿಯೇ ಉಳಿದಲ್ಲಿ, ಅಂಥ ಪಾಲುದಾರ ಅಥವಾ ಪಾಲುದಾರರು ಯಾವುದೇ ರೀತಿಯಲ್ಲಿ ಅಂಥ ಪಾಲುಗಾರಿಕೆ ಫರ್ಮನ್ನು ಪುನರ್ರಚನೆ ಮಾಡಿದಲ್ಲಿ. | ಫರ್ಮಿನಲ್ಲಿ ಉಳಿದಿರುವ ಸ್ಥಿರ ಸ್ವತ್ತಿನ ಮಾರುಕಟ್ಟೆ ಬೆಲೆಯ ಮೇಲೆ ಹಸ್ತಾಂತರಣಕ್ಕೆ (ಸಂ.20) ವಿಧಿಸಬಹುದಾದ ಅಷ್ಟೇ ಶುಲ್ಕ |
| (ಬಿ)ಯಾವುದೇ ಇತರ ಸಂದರ್ಭದಲ್ಲಿ | ಒಂದು ಸಾವಿರ ರೂಪಾಯಿಗಳು |
| **(ಸಿ) ವಿಘಟನೆ** | |
| (ಎ) ಪಾಲುದಾರಿಕೆಯು ಆರಂಭವಾದಾಗ ಒಬ್ಬ ಪಾಲುದಾರನಿಗೆ ಅಥವಾ ಪಾಲುದಾರರಿಗೆ ಸೇರಿದಸ್ವತ್ತನ್ನು ಮತ್ತೊಬ್ಬ ಪಾಲುದಾರ ಅಥವಾ ಪಾಲುದಾರರಿಗೆ ವಿತರಣೆ ಅಥವಾ ಹಂಚಿಕೆ ಮಾಡಿದ್ದಲ್ಲಿ | ಹಾಗೆ ವಿಘಟನೆಯಾದಾಗ ಅಂಥ ಸ್ವತ್ತನ್ನು ವಿತರಣೆ ಅಥವಾ ಹಂಚಿಕೆ ಮಾಡಿರದಿದ್ದಲ್ಲಿ ಅಥವಾ ನೀಡಿರದಿದ್ದಲ್ಲಿ ಸಂದಾಯ ಮಾಡಬೇಕಾಗುತ್ತಿದ್ದ ಸುಂಕದ ಜೊತೆಗೆ, ಪಾಲುದಾರ ಅಥವಾ ಪಾಲುದಾರರಿಗೆ ವಿಘಟನಾ ಪತ್ರದ ಅಡಿಯಲ್ಲಿ ವಿತರಣೆ ಅಥವಾ ಹಂಚಿಕೆ ಮಾಡಲಾಗಿದ್ದರೂ ಅಥವಾ ನೀಡಲಾಗಿದ್ದ ಸ್ವತ್ತಿನ ಮಾರುಕಟ್ಟೆ ಬೆಲೆಗೆ ಹಸ್ತಾಂತರಣಕ್ಕೆ (ಸಂ.20) ವಿಧಿಸಬಹುದಾದಷ್ಟೇ ಸುಂಕ. |
| (ಬಿ) ಯಾವುದೇ ಇತರ ಸಂದರ್ಭದಲ್ಲಿ | ಒಂದು ಸಾವಿರ ರೂಪಾಯಿಗಳು |

| "40ಎ | **ಸೀಮಿತ ಹೊಣೆಗಾರಿಕೆ ಪಾಲುದಾರಿಕೆ,–**<br>ಎ. ಸೀಮಿತ ಹೊಣೆಗಾರಿಕೆ ಪಾಲುದಾರಿಕೆಯ ಸ್ಥಾಪನೆ ಅಥವಾ ಫರ್ಮ್/ಖಾಸಗಿ ಕಂಪನಿ/ಪಟ್ಟಿಯಲ್ಲಿಲ್ಲದ ಸಾರ್ವಜನಿಕ ಸೀಮಿತ ಕಂಪನಿಯನ್ನು ಸೀಮಿತ ಹೊಣೆಗಾರಿಕೆ ಪಾಲುದಾರಿಕೆಯನ್ನಾಗಿ ಮಾರ್ಪಡಿಸುವಿಕೆ. | |
|---|---|---|

| | (ಎ) ಬಂಡವಾಳವು ಹತ್ತು ಲಕ್ಷ ರೂಪಾಯಿಗಳನ್ನು ಮೀರದಿರುವಲ್ಲಿ | ಒಂದು ಸಾವಿರ ರೂಪಾಯಿಗಳು |
|---|---|---|
| | (ಬಿ) ಬಂಡವಾಳವು ಹತ್ತು ಲಕ್ಷ ರೂಪಾಯಿಗಳನ್ನು ಮೀರಿದಲ್ಲಿ; ಹತ್ತು ಲಕ್ಷ ರೂಪಾಯಿಗಳನ್ನು ಮೀರಿದ ಪ್ರತಿ ಐದು ಲಕ್ಷ ರೂಪಾಯಿಗಳು ಅಥವಾ ಅದರ ಭಾಗಕ್ಕೆ | ಐದುನೂರು ರೂಪಾಯಿಗಳು. |
| | **ಬಿ.** ಸೀಮಿತ ಹೊಣೆಗಾರಿಕೆ ಪಾಲುದಾರಿಕೆಯ ಪುನಾರಚನೆ ಅಥವಾ ಸಂಯೋಜನೆ | ಕರ್ನಾಟಕ ರಾಜ್ಯದಲ್ಲಿರುವ ಹಸ್ತಾಂತರಣ ಸೀಮಿತ ಹೊಣೆಗಾರಿಕೆ ಪಾಲುದಾರಿಕೆಯ ಸ್ವತ್ತಿನ ಪ್ರತಿಫಲ ಅಥವಾ ಮಾರುಕಟ್ಟೆ ಮೌಲ್ಯ ಇವುಗಳಲ್ಲಿ ಯಾವುದು ಹೆಚ್ಚೋ ಅದರ ಮೇಲಿನ ಶೇಕಡ ಎರಡು. |

**ಅನುಚ್ಛೇದ 41. ಮೊಖ್ತ್ಯಾರನಾಮೆಗಳು–ಪ್ರತಿನಿಧಿ ಪತ್ರವಲ್ಲದ (2(1) (ಪಿ) ಪ್ರಕರಣದ ಮೂಲಕ ಪರಿಭಾಷಿಸಿದಂತೆ)** xx

| (ಇಬಿ) ಕರ್ನಾಟಕ ರಾಜ್ಯದಲ್ಲಿರುವ ಸ್ಥಿರ ಸ್ವತ್ತನ್ನು ಮಾರುವುದಕ್ಕೆ ಸಂಬಂಧಿಸಿದಂತೆ ಪ್ರಾಧಿಕೃತನಾದ ವ್ಯಕ್ತಿಯು, ಬರೆದು ಕೊಡುವವನ ತಂದೆ, ತಾಯಿ, ಪತ್ನಿ, ಅಥವಾ ಪತಿ, ಗಂಡು ಮಕ್ಕಳು, ಹೆಣ್ಣು ಮಕ್ಕಳು, ಸಹೋದರರು, ಸಹೋದರಿಯರನ್ನು ಹೊರತುಪಡಿಸಿ ಇತರ ವ್ಯಕ್ತಿಗೆ ನೀಡಿದಾಗ, | ಮುಖ್ತ್ಯಾರುನಾಮೆಯ ವಸ್ತು ವಿಷಯವಾದ ಸ್ವತ್ತಿನ ಮಾರುಕಟ್ಟೆ ಮೌಲ್ಯದ ಮೇಲೆ 20 (1)ನೇ ಅನುಚ್ಛೇದದ ಅಡಿಯಲ್ಲಿ ಹಸ್ತಾಂತರ ಪತ್ರಕ್ಕೆ ವಿಧಿಸುವಷ್ಟೇ ಶುಲ್ಕ. |
|---|---|

**ಅನುಚ್ಛೇದ 45. ಬಿಡುಗಡೆ.–**

(ಎ) xx

| (ಬಿ) ಹಕ್ಕು ಬಿಡುಗಡೆ ಪತ್ರವು ಕುಟುಂಬದ ಸದಸ್ಯರ ನಡುವೆ ಆಗಿದ್ದರೆ<br>xx | ಒಂದು ಸಾವಿರ ರೂಪಾಯಿಗಳು |
|---|---|

**ಅನುಚ್ಛೇದ 48. ವ್ಯವಸ್ಥಾಪನಾ ಪತ್ರ.–**

| ಎ. ಲಿಖಿತ (ಒಂದು ವಧೂವರದಕ್ಷಿಣೆ ಲಿಖಿತವೂ ಒಳಗೊಂಡು) | |
|---|---|
| (i) xx | Xx |
| (ii) ವಿಲೇವಾರಿಯು, ವ್ಯವಸ್ಥಾಪಕನು ಸ್ವತ್ತನ್ನು ತನ್ನ ಕುಟುಂಬದ ಸದಸ್ಯರ ನಡುವೆ ಹಂಚಿಕೆ ಮಾಡುವ ಉದ್ದೇಶಕ್ಕಾಗಿ ಇದ್ದರೆ | ಒಂದು ಸಾವಿರ ರೂಪಾಯಿಗಳು |

xx xx xx

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**NINTH SESSION**
**(ADJOURNED MEETINGS)**

## THE KARNATAKA STAMP (SECOND AMENDMENT) BILL, 2016

**(L.A. Bill No. 16 of 2016)**

A Bill further to amend the Karnataka Stamp Act, 1957.

Whereas it is expedient further to amend the Karnataka Stamp Act, 1957 (Karnataka Act 34 of 1957) for the purposes hereinafter appearing;

Be it enacted by the Karnataka State Legislature in the Sixty-seventh Year of Republic of India as follows:-

**1. Short title and Commencement.-** (1) This Act may be called the Karnataka Stamp (Second Amendment) Act, 2016.

(2) It shall come into force with effect from the first day of April, 2016.

**2. Amendment of Section 9.-** In the Karnataka Stamp Act, 1957 (Karnataka Act 34 of 1957) (hereinafter referred to as the Principal Act), in Section 9, in sub-section(1), in clause (a), after the last proviso, the following shall be inserted, namely:-

"Provided also that, the State Government may, in public interest, by notification, remit the stamp duty payable on instruments executed by or in favour of the Government of Karnataka, the Government Institutions, Public Sector Undertakings, farmers or other persons as specified in Notification No. RD 71 MuNoMu 2014, dated 10-02-2016, in the following circumstances, namely:-

(i) when the farmer's land is acquired and in lieu of compensation amount, when developed land is given as compensation;

(ii) when the farmer's land is acquired and from the compensation amount if the farmer purchases agricultural or non-agricultural land; and

(iii) when the farmer's or other's land is acquired and from the compensation amount, if the farmer or other person purchases agricultural or non-agricultural land;

for the purpose of the above exemption a certificate to that effect issued by the Deputy Commissioner or the concerned Authority has to be furnished containing the details of the land acquired and the details of the compensation given."

**3. Amendment of Schedule.-** In the schedule to the Principal Act,-

(A) In article 5,-

(a) in clause (e), in sub-clause (i), in column (2), for the word, "without", the word, "before", shall be substituted,

(b) in clause (g), in sub-clause (i), in column (3), for the words, "Two per cent", the words, " Three per cent" shall be substituted,

(c) for clause (i-e) and the entries relating thereto, the following shall be substituted namely:-

"

| (i-e) | Chit Agreement, executed in the State of Karnataka under Section 6 of the Chit Funds Act, 1982.- | |
|---|---|---|
| | (i) where the value of the chit does not exceed rupees one lakh | Rupees one hundred |
| | (ii) where the value of the chit exceeds rupees one lakh | Rupees one hundred plus rupees fifty for every rupees one lakh or part thereof, exceeding rupees one lakh. |

"

(B) in article 20, -

(i) in clause (4),-

(a) in sub-clause (i), in column (3), for the words, "two per cent", the words, "Three per cent", shall be substituted;

(b) in sub-clause (ii), in column (3), for the words, "two per cent", the words, "Three per cent", shall be substituted;

(ii) in clause (5), in sub-clause (i), in column (3), for the words, "Two per cent", the words, "Three per cent", shall

be substituted;

(iii) in clause (7), in column (3),-

(a) for the figure, "1%", the words, "Three per cent", shall be substituted.

(b) the following proviso, shall be inserted at the end, namely.-

"Provided that, if the proper duty is paid under clause(ec) of Article 41 on Power of Attorney, executed by and between the same parties and in respect of the same property, then the duty payable on the corresponding conveyance under Article 20(7), shall not exceed rupees two hundred."

(C) In Article 28, in clause (b), in column (3), for the words, "Rupees one thousand", the following shall be substituted, namely:-

"(i) If the property is situated within the limits of Bangalore Metropolitan Regional Development Authority or Bruhat Bangalore Mahanagara Palike or City Corporation .............. Rupees five thousand;

(ii) If the property is situated within the limits of City or Town Municipal Council or Town Panchayat area ...........Rupees three thousand;

(iii) If the property is situated within the limits other than the limits specified in items (i) and (ii) .................... Rupees one thousand;

Provided that, if the property is situated in any of the combinations of limits, mentioned in items (i), (ii) and (iii) above the duty payable shall be the maximum of the duties specified in items (i), (ii) and (iii) above."

(D) In Article 30, in clause (1), in sub-clause (vi), in column (3), in the second proviso, for the words, "rupees one thousand", the following, shall be substituted, namely:-

"(i) If the property is situated within the limits of Bangalore Metropolitan Regional Development Authority or Bruhat Bangalore Mahanagara Palike or City Corporation .......................... Rupees five thousand;

(ii) If the property is situated within the limits of City or Town Municipal Council or Town Panchayat area ........... Rupees three thousand;

(iii) If the property is situated within the limits other than the limits specified in items (i) and (ii) ....................... Rupees one thousand;

Provided that, if the property is situated in any of the combinations of limits, mentioned in items (i), (ii) and (iii) above the duty payable shall be the maximum of the duties described in items (i), (ii) and (iii) above."

(E) In Article 40,-

(a) for clause A, and the entries relating thereunder in columns (2) and (3), the following shall be substituted, namely.-

"

| A. | Instrument of Constitution | Rupees Two Thousand. |
|---|---|---|

"

(b) In clause B, in sub-clause (a), in column (3), for the words and figure, "The same duty as conveyance (No. 20)", the words, "Three per cent", shall be substituted; and

(c) In clause C, in sub-clause (a), in column (3), for the words and figure, "The same duty as conveyance (No. 20) for", the words, "Three per cent on", shall be substituted.

(F) In article 40-A,-

(a) In clause A, in sub-clause (b), in column (3), for the words, "Rupees five hundred", the words "Rupees one thousand plus rupees five hundred for

every rupees five lakhs or part thereof, exceeding rupee ten lakhs capital amount, subject to a maximum of rupees ten lakhs", shall be substituted.

(b) In clause B, in column (3), for the words, "Two percent", the words, "Three percent", shall be substituted;

(G) In Article 41, after clause (eb), and the entries relating thereto, the following shall be inserted, namely.-

"

| (ec) | When given to person other than the father, mother, wife or husband, sons, daughters, brothers, sisters in relation to the executant authorising such person to sell Transferable Development Rights relating to immovable property situated in Karnataka State. | The same duty as a conveyance under Article 20(7) on the market value of the property which is the subject-matter of Power of Attorney: |
|---|---|---|

"

(H) In Article 45, in clause (b), in column (3), for the words, "Rupees one thousand", the following, shall be substituted, namely.-

"(i) If the property is situated within the limits of Bangalore Metropolitan Regional Development Authority or Bruhat Bangalore Mahanagara Palike or City Corporation ……Rupees five thousand;

(ii) If the property is situated within the limits of City or Town Municipal Council or Town Panchayat area …………. Rupees three thousand;

(iii) If the property is situated within the limits other than the limits specified in items (i) and (ii) …………………. Rupees one thousand;

Provided that, if the property is situated in any of the combinations of limits, mentioned in items (i), (ii) and (iii) above the duty payable shall be the maximum of the duties specified in items (i), (ii) and (iii) above."

(I) In Article 48, in clause (A), in sub-clause (ii), in column (3), for the words, "Rupees one thousand", the following shall be substituted, namely.-

"(i) If the property is situated within the limits of Bangalore Metropolitan Regional Development Authority or Bruhat Bangalore Mahanagara Palike or City Corporation ……………………. Rupees five thousand;

(ii) If the property is situated within the limits of City or Town Municipal Council or Town Panchayat area ……….. Rupees three thousand;

(iii) If the property is situated within the limits other than the limits specified in items (i) and (ii) …………….. Rupees one thousand;

Provided that, if the property is situated in any of the combinations of limits, mentioned in items (i), (ii) and (iii) above the duty payable shall be the maximum of the duties specified in items (i), (ii) and (iii) above."

**4. Validation.-** Notwithstanding anything contained in Section 9 of the Principal Act, as existed prior to commencement of this Act, the exemption or remission of stamp duty granted under Notification No. RD 71 MuNoMu 2014, dated 10-02-2016, shall be deemed to be valid and effective and have been granted under Section 9, as amended by this Act.

**STATEMENT OF OBJECTS AND REASONS**

To give effect to the proposal made in the Budget Speech of 2016-17, it is considered necessary to amend the Karnataka Stamp Act, 1957 (Karnataka Act 34 of 1957) and to make consequential amendments.

Hence the Bill,

**FINANCIAL MEMORANDUM**

There is no extra expenditure involved in the proposed legislative measure.

**V. SHRINIVASA PRASAD**
Minister for Revenue

**S.Murthy**
Secretary (I/C)
Karnataka Legislative Assembly

**ANNEXURE**
**Extract from the Karnataka Stamp Act, 1957**
**(Karnataka Act 34 of 1957)**

**X X XX**

**Section 9.-** (1) (a) **xx**

Provided also that the State Government may, in public interest, by notification, reduce or remit, till 30th September 2019 the stamp duty payable on any instrument to be specified therein executed by specified new and existing micro, small, medium enterprise (MSME), Large, Mega, Ultra Mega, Super Mega enterprises including expansion, modernization and diversification projects as defined in the Karnataka Industrial Policy 2014-2019 specified in the Government order CI 58 SPI 2013 dated: 01.10.2014 or by any such key projects of core area as defined in the said policy or specified by the State Government from time to time Provisions

**X X XX XX**

**Art. 5.** Agreement or [its records or] Memorandum of an Agreement-

| | |
|---|---|
| (e) if relating to sale of immovable property wherein part performance of the contract<br>(i) possession of the property is delivered without executing the conveyance. | xx |
| (g) If relating to sale of moveable Property.-<br>(i) possession of the property is delivered or is agreed to be delivered without executing the conveyance | Two per cent of the consideration or market value of the property, whichever is higher:<br><br>XX |

| (i-e) Chit Agreement, executed in the State of Karnataka under Section 6 of the Chit Funds Act, 1982, where the value of the chit.- | |
|---|---|
| (i) Does not exceed rupees one lakh | Rupees one hundred |
| (ii) exceeds rupees one lakh but does not exceed rupees five lakhs | Rupees Five hundred |
| (iii) Exceed rupees five lakhs, for every rupees two laksh or part thereof | Rupees one hundred |

**xx** **xx**

**Art. 20.-**

| (4) if relating to an order made by the High court under Section 394 of the Companies Act, 1956 in respect of.- | |
|---|---|
| (i) Amalgamation of Companies, including a subsidiary amalgamating with parent company | [two per cent] on the market value of the property] of the transferor company, located within the State of Karnataka and transferred to the transferee company; or<br>xx |
| (ii) Reconstruction of Demerger of a company | [two per cent] on the market value of the property] of the transferor company, located within the State of Karnataka, and transferred to the resulting company; or<br>xx |
| (5) Conveyance relating to industrial machinery.-<br>(i) when industrial machinery is treated as movable property | Two per cent of consideration or market value of the property whichever is higher, |
| (7) Conveyance relating to Transferable Development Rights | 1% on the market value of the Transferable Development Rights equal to the market value of the corresponding portion of the property leading to such Transferable Development Rights, which is the subject matter of conveyance; or consideration for such conveyance; whichever is higher.<br>xx |

**Art. 28.- Gift- XX**

| (b) Where the done is a member of the family of the donor.- | Rupees one thousand |
|---|---|

**Art. 30.- [Lease of immovable property] XX**

| | |
|---|---|
| (vi) xx | xx<br>xx<br>Provided further that the duty in respect of an instrument of lease executed in favour of the wife, husband, father, mother, son, daughter, brother or sister in relation to the person shall be rupees one thousand.<br>xx |

**Art. 40.- Partnership:**

| | |
|---|---|
| A. Instrument of-<br>(a) Where the Capital of the partnership does not exceed [rupees fifty thousand]<br>(b) In any other case | Five hundred rupees.<br><br>Two thousand rupees |
| B. Reconstitution:-<br>(a) Where immovable property contributed as share by a partner or partners remains with the firm at the time of outgoing in whatever manner by such partner or partners on reconstitution of such partnership firm<br>(b) In any other case | The same duty as conveyance duty (No. 20) on the market value of the immovable property remaining with the firm.<br><br>One thousand rupees |
| C. Dissolution of:—<br>(a) Where the property which belonged to one partner or partners when the partnership commenced is distributed or alloted or given to another partner or partners.<br>(b) In any other case | The same duty as conveyace (No. 20) for a market value equal to the market value of the property distributed or alloted or given to partner under the instrument of dissolution, in addition to the duty which would have been chargeable on such dissolution if such property had not been distributed or alloted or given.<br><br>one thousand rupees |

**Art.40-A.- Limited Liability Partnership.-**

| | |
|---|---|
| A. Constitution of Limited Liability Partnership, or conversion of firm/private company/unlisted public limited company it no limited liability partnership.-<br>(b)Where the capital exceeds rupees ten laksh; for every rupees five lakh of part thereof exceeding rupees ten lakhs | Rupees five hundred |

| B. Reconstruction or amalgamation of Limited Liability Partnership | Two percent on the consideration or market value of the property whichever is higher of the transferor limited liability partnership located within the State of Karnataka.] |
|---|---|

**Art. 41.-Power of Attorney.–** (as defined by Section 2(1) (p) not being a proxy-

| (eb) When given to a person other than the father, mother, wife or husband, sons, daughters, brothers, sisters in relation to the executant authorising such person to sell immoveable property situated in Karnataka State | The same duty as conveyace under Article 20(1) on the market value of the property which is the subject matter of the power of attorney. |
|---|---|

**Art. 45.- Release,**

(a) xx xx

| (b) where the release is between the family members.<br>Xx | Rupees one thousand. |
|---|---|

**Art. 48.- Settlement,-**

| A. Instrument of (including a deed of dower) | |
|---|---|
| (i) xx | xx |
| (ii) Where the disposition is not for the purpose of distributing the property of the settler among his family. | Rupees one thousand. |

**xxx** **xxx** **xxx**

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– IVA | ಬೆಂಗಳೂರು, ಬುಧವಾರ, ಮಾರ್ಚ್ ೩೦, ೨೦೧೬ (ಚೈತ್ರ ೧೦, ಶಕ ವರ್ಷ ೧೯೩೭) | ನಂ. ೫೭೧ |
|---|---|---|
| Part– IVA | Bengaluru, Wednesday, March 30, 2016 (Chaitra 10, Shaka Varsha 1937) | No. 571 |


***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/17/Bill/2016, Bengaluru, Dated: 30-03-2016***

The following Bill was introduced in Legislative Assembly on 30-03-2016

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಒಂಭತ್ತನೇ ಅಧಿವೇಶನ**

**(ಮುಂದುವರೆದ ಉಪವೇಶನಗಳು)**

**ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ವಿಧೇಯಕ, 2016**

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ–17)**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು (1959ರ ಕರ್ನಾಟಕ ಅಧಿನಿಯಮ 11) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

2. **12ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ (1959ರ ಕರ್ನಾಟಕ ಅಧಿನಿಯಮ 11) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 12ನೇ ಪ್ರಕರಣದ (5)ನೇ ಉಪಪ್ರಕರಣದಲ್ಲಿ, "ಅಂಥ ಸಹಕಾರ ಸಂಘದ ಹಿತದೃಷ್ಟಿಯಲ್ಲಿ ಅಥವಾ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**3. 18ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 18ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಪರಂತುಕಕ್ಕೆ, 6.9.2014ರಿಂದ ಜಾರಿಗೆ ಬರುವಂತೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಪರಂತು, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 2014 ಜಾರಿಗೆ ಬಂದ ದಿನದಂದು ಅಥವಾ ತರುವಾಯ ಯಾವುದೇ ಸಹಕಾರ ಸಂಘದಲ್ಲಿ (ಎ) ಖಂಡದ ಅಡಿಯಲ್ಲಿನ ಸಹವರ್ತಿ ಸದಸ್ಯರ ಸಂಖ್ಯೆಯು, ನೌಕರರ ಸಹಕಾರ ಸಂಘದ ಹೊರತಾಗಿ, ಒಟ್ಟು ಖಾಯಂ ಸದಸ್ಯತ್ವದ ಶೇಕಡಾ ಹದಿನೈದನ್ನು ಮೀರತಕ್ಕದ್ದಲ್ಲ."

**4. 18ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 18ಬಿ ಪ್ರಕರಣದ (i)ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

“ಸಹಕಾರ ಸಂಘಗಳ ಸಂಯೋಜನೆ ಅಥವಾ ಪುನರ್‌ಸಂಘಟನೆ ಅಥವಾ ವಿಭಜನೆಯ ಸಂದರ್ಭದಲ್ಲಿ ಅಂಥ ಸಂಯೋಜಿತ, ಪುನರ್‌ಸಂಘಟಿತ ಅಥವಾ ವಿಭಜಿತ ಸಹಕಾರ ಸಂಘವು ನಿರ್ಣಯದ ಮೂಲಕ ಆತನ ಪ್ರಾತಿನಿಧಿತ್ವವನ್ನು ಹಿಂತೆಗೆದುಕೊಳ್ಳುವವರೆಗೆ ಅಂಥ ಸಹಕಾರ ಸಂಘವನ್ನು ಪ್ರತಿನಿಧಿಸುವಂತೆ ಆತನು ಮುಂದುವರೆಯಬಹುದು.”

**5. 28ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 28ಎ ಪ್ರಕರಣದ,–

(1) (2)ನೇ ಉಪಪ್ರಕರಣದಲ್ಲಿ,–

(i) "ಹನ್ನೊಂದಕ್ಕಿಂತ ಕಡಿಮೆ ಇಲ್ಲದ" ಎಂಬ ಪದಗಳಿಗೆ "ಹದಿಮೂರಕ್ಕಿಂತ ಕಡಿಮೆಯಿಲ್ಲದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (i)ನೇ ಖಂಡದಲ್ಲಿ,–

(ಎ) (ಎ) ಬಾಬುವಿನಲ್ಲಿ "ಹನ್ನೊಂದು" ಎಂಬ ಪದಕ್ಕೆ "ಹದಿಮೂರು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

(ಬಿ) (ಬಿ) ಬಾಬುವಿನಲ್ಲಿ "ಹದಿಮೂರು" ಎಂಬ ಪದಕ್ಕೆ "ಹದಿನೈದು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

(ಸಿ) (ಸಿ) ಬಾಬುವಿನಲ್ಲಿ "ಹದಿನೈದು" ಎಂಬ ಪದಕ್ಕೆ "ಹದಿನೇಳು” ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

(2) (3)ನೇ ಉಪಪ್ರಕರಣದ (i)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(i) ಒಂದು ಸ್ಥಾನವನ್ನು ಅನುಸೂಚಿತ ಜಾತಿಗಳಿಗೆ ಸೇರಿದ ವ್ಯಕ್ತಿಗಳಿಂದ ಚುನಾವಣೆಯ ಮೂಲಕ ಭರ್ತಿಮಾಡುವುದಕ್ಕಾಗಿ ಮತ್ತು ಒಂದು ಸ್ಥಾನವನ್ನು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಂದ ಚುನಾವಣೆಯ ಮೂಲಕ ಭರ್ತಿ ಮಾಡುವುದಕ್ಕಾಗಿ;”

**6. 29ಎಚ್ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 29ಜಿ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**29ಎಚ್. ಪದಾಧಿಕಾರಿಯ ವಿರುದ್ಧ ಅವಿಶ್ವಾಸ ಪ್ರಸ್ತಾವ.–** (1) ಪದಾಧಿಕಾರಿಯ ವಿರುದ್ಧದ ಅವಿಶ್ವಾಸ ಪ್ರಸ್ತಾವವನ್ನು, ಆತನು ಪದಾಧರಣ ಮಾಡಿದ ಎರಡು ವರ್ಷಗಳ ನಂತರ ಮಾತ್ರವೇ ಮಂಡಿಸಬಹುದು. ಅವಿಶ್ವಾಸ ಪ್ರಸ್ತಾವಕ್ಕೆ ಒಮ್ಮೆ ಸೋಲಾದ ಸಂದರ್ಭದಲ್ಲಿ, ಮತ್ತೊಂದು ವರ್ಷದ ಒಳಗಾಗಿ ಹೊಸ ಪ್ರಸ್ತಾವವನ್ನು ಮಂಡಿಸತಕ್ಕದ್ದಲ್ಲ. ಸಂಬಂಧಪಟ್ಟ ಸಹಕಾರ ಸಂಘದ ಮಂಡಳಿಯ ಮೂರನೇ ಒಂದರಷ್ಟು ಚುನಾಯಿತ ಸದಸ್ಯರಿಂದ ಮನವಿಯನ್ನು ಸಲ್ಲಿಸದ ಹೊರತು ಅವಿಶ್ವಾಸ ಪ್ರಸ್ತಾವವನ್ನು ಮಂಡಿಸತಕ್ಕದ್ದಲ್ಲ.

(2) ಒಂದು ಸಹಕಾರ ಸಂಘದ ಪದಾಧಿಕಾರಿಯು, ಆತನಲ್ಲಿ ವಿಶ್ವಾಸ ಬಯಸಿ ವ್ಯಕ್ತಪಡಿಸಿದ ಪ್ರಸ್ತಾವವನ್ನು ವಿಶೇಷವಾಗಿ ಆ ಉದ್ದೇಶಕ್ಕಾಗಿ ಕರೆಯಲಾದ ಸಭೆಯಲ್ಲಿ ಸಹಕಾರ ಸಂಘದ ಚುನಾಯಿತ ನಿರ್ದೇಶಕರ ಒಟ್ಟು ಸಂಖ್ಯೆಯಲ್ಲಿ ಮೂರನೇ ಎರಡರಷ್ಟು ಬಹುಮತದಿಂದ ಅಂಗೀಕರಿಸಿದರೆ, ಕೂಡಲೇ ಆತನ ಪದವು ತೆರವಾಗಿದೆ ಎಂದು ಭಾವಿಸತಕ್ಕದ್ದು.

(3) ಅವಿಶ್ವಾಸ ಪ್ರಸ್ತಾವದ ಪ್ರಕ್ರಿಯೆಯು ನಿಯಮಿಸಬಹುದಾದಂತೆ ಇರತಕ್ಕದ್ದು."

**7. 63ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ನೇ ಪ್ರಕರಣದಲ್ಲಿ,–

(i) (13)ನೇ ಉಪಪ್ರಕರಣದಲ್ಲಿ, ಕೊನೆಯಲ್ಲಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

“ಸಹಕಾರ ಸಂಘವು, ಹೊರಡಿಸಬೇಕಾದ ಮುಂದಿನ ಲೆಕ್ಕಪರಿಶೋಧನಾ ವರದಿಯಲ್ಲಿ ಪುನರ್ ಲೆಕ್ಕಪರಿಶೋಧನೆಯ ಫಲಿತಾಂಶವನ್ನು ಸೇರಿಸತಕ್ಕದ್ದು.”

(ii) (13ಎ) ಉಪಪ್ರಕರಣದಲ್ಲಿ “ಮೂರು ವರ್ಷಗಳಿಗೆ” ಎಂಬ ಪದಗಳಿಗೆ “ಐದು ವರ್ಷಗಳಿಗೆ” ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**8. 70ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 70ನೇ ಪ್ರಕರಣದ (2)ನೇ ಉಪಪ್ರಕರಣದ (ಬಿ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಸಿ) ಸಂಘದ ಮಂಡಳಿಯ ಅಧ್ಯಕ್ಷ, ಉಪಾಧ್ಯಕ್ಷ ಅಥವ ಯಾವೊಬ್ಬ ಪದಾಧಿಕಾರಿಯ ಚುನಾವಣೆಗೆ ಸಂಬಂಧಿಸಿದಂತೆ ಉದ್ಭವಿಸುವ ಯಾವುದೇ ವಿವಾದ."

**9. 108ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 108ನೇ ಪ್ರಕರಣದಲ್ಲಿ “ಸಲ್ಲಿಸಿದ ಅಪೀಲಿಗೆ” ಎಂಬ ಪದಗಳಿಗೆ “ಸಲ್ಲಿಸಿದ ಮತ್ತು ಅದರ ಮುಂದೆ ಬಾಕಿ ಇರುವ ಅಪೀಲಿಗೆ” ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**10. 132ನೇ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 132ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**“132. ತೊಂದರೆಗಳನ್ನು ನಿವಾರಿಸುವ ಅಧಿಕಾರ.–**ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಗಳು ಉಂಟಾದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ಹೊರಡಿಸುವ

ಮೂಲಕ, ತೊಂದರೆಯನ್ನು ನಿವಾರಿಸಲು ಅವಶ್ಯಕವೆಂದು ಅಥವಾ ಯುಕ್ತವೆಂದು ಕಂಡುಬರುವ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದ ಅಂಥ ಉಪಬಂಧಗಳನ್ನು ರಚಿಸಬಹುದು."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ಈ ಮುಂದಿನವುಗಳಿಗಾಗಿ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ, ಎಂದರೆ:-

(i) ಅನುಸೂಚಿಯ ಜಾತಿಗಳು ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗಾಗಿ ಪ್ರತ್ಯೇಕ ಸದಸ್ಯತ್ವವನ್ನು ಒದಗಿಸಿಕೊಡಲು ಸಹಕಾರ ಸಂಘಗಳ ಮಂಡಳಿಯ ಸದಸ್ಯರ ಗರಿಷ್ಠ ಸಂಖ್ಯೆಯನ್ನು ಹೆಚ್ಚಿಸುವುದು;

(ii) ಸಂಯೋಜನೆಗೊಂಡ ಅಥವಾ ವಿಭಜನೆಗೊಂಡ ಅಥವಾ ಪುನರ್‌ರಚನೆಯಾದ ಸಂಘವು ನಿರ್ಣಯದ ಮೂಲಕ ಸದಸ್ಯತ್ವವನ್ನು ಹಿಂತೆಗೆದುಕೊಳ್ಳುವವರೆಗೆ ಅಪೆಕ್ಸ್/ಫೆಡರಲ್ ಸಹಕಾರ ಸಂಘದಲ್ಲಿ ಪ್ರಾರಂಭಿಕ ಸಹಕಾರ ಸಂಘದ ನಿರ್ದೇಶಕತ್ವವನ್ನು ಮುಂದುವರೆಸುವುದು;

(iii) ಸಹಕಾರ ಸಂಘಗಳ ಪದಾಧಿಕಾರಿಯ ವಿರುದ್ಧ ಅವಿಶ್ವಾಸ ನಿರ್ಣಯ ಮಂಡಿಸುವುದು;

(iv) ಪುನರೀಕ್ಷಣಾ ಪಿಟಿಷನ್‌ಗಳ ಸಂಬಂಧದಲ್ಲಿ ರಾಜ್ಯ ಸರ್ಕಾರದ ಅಧಿಕಾರಗಳ ಬಗ್ಗೆ ಸ್ಪಷ್ಟತೆಯನ್ನು ತರುವುದು;

(v) ಅಧಿನಿಯಮವನ್ನು ಜಾರಿಗೆ ತರುವಲ್ಲಿ ಉಪಬಂಧಗಳನ್ನು ಕಲ್ಪಿಸುವಲ್ಲಿ ಇರುವ ತೊಂದರೆಯನ್ನು ನಿವಾರಿಸುವುದು;

(vi) ಕೆಲವು ಆನುಷಂಗಿಕ ತಿದ್ದುಪಡಿಗಳನ್ನೂ ಕೂಡಾ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಹೆಚ್.ಎಸ್. ಮಹದೇವ ಪ್ರಸಾದ್**
ಸಹಕಾರ ಮತ್ತು ಸಕ್ಕರೆ ಸಚಿವರು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ (1959ರ ಕರ್ನಾಟಕ ಅಧಿನಿಯಮ 11)**

**ಉದ್ಧೃತ ಭಾಗ**

**XX XX XX**

**12. ಸಹಕಾರ ಸಂಘದ ಉಪವಿಧಿಗಳ ತಿದ್ದುಪಡಿ.- XX XX XX**

(5) ರಿಜಿಸ್ಟ್ರಾರನಿಗೆ ಅಂಥ ಸಹಕಾರ ಸಂಘದ ಹಿತದೃಷ್ಟಿಯಲ್ಲಿ ಅಥವಾ ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಉಪಬಂಧಗಳನ್ನು ಜಾರಿಗೊಳಿಸಲು ಅಂಥ ಸಂಘದ ಉಪವಿಧಿಗಳ ಯಾವುದೇ ತಿದ್ದುಪಡಿಯು ಅವಶ್ಯ ಅಥವಾ ಅಪೇಕ್ಷಣೀಯವೆಂದು ಕಂಡುಬಂದರೆ, ರಿಜಿಸ್ಟ್ರಾರನು, ಆದೇಶದ ಮೂಲಕ, ತಾನು

ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ತಾನು ನಿರ್ದಿಷ್ಟಪಡಿಸಿದ ಸಮಯದೊಳಗೆ ತಾನು ಪ್ರಸ್ತಾವಿಸಿದ ತಿದ್ದುಪಡಿಯನ್ನು ಮಾಡುವಂತೆ ಆ ಸಹಕಾರ ಸಂಘವನ್ನು ನಿರ್ದೇಶಿಸಬಹುದು.

**XX XX XX**

**18. ನಾಮಮಾತ್ರದ ಅಥವಾ ಸಹವರ್ತಿ ಸದಸ್ಯರು.– XX XX XX**

"ಪರಂತು, ಯಾವುದೇ ಸಹಕಾರ ಸಂಘದಲ್ಲಿನ, (ಎ) ಖಂಡದ ಅಡಿಯಲ್ಲಿನ ಸಹವರ್ತಿ ಸದಸ್ಯರ ಸಂಖ್ಯೆಯು, ಸಂಘದ ಒಟ್ಟು ಸದಸ್ಯತ್ವದ ಶೇಕಡಾ ಹದಿನೈದರಷ್ಟನ್ನು ಮೀರತಕ್ಕದ್ದಲ್ಲ, ಆದಾಗ್ಯೂ ತಮ್ಮ ಒಟ್ಟು ಸದಸ್ಯತ್ವದ ಸಂಖ್ಯೆಯ ಶೇಕಡಾ ಹದಿನೈದಕ್ಕಿಂತ ಹೆಚ್ಚು ಸಹವರ್ತಿ ಸದಸ್ಯರನ್ನು ಈಗಾಗಲೇ ಹೊಂದಿರುವ ಸಹಕಾರ ಸಂಘಗಳ ಸಂದರ್ಭದಲ್ಲಿ, ಹೆಚ್ಚಿನ ಸಹವರ್ತಿ ಸದಸ್ಯರನ್ನು, 16ನೇ ಪ್ರಕರಣದ ಅಡಿಯಲ್ಲಿ ಆತನು ಅರ್ಹನಾಗಿದ್ದಲ್ಲಿ, ಆತನನ್ನು ಸದಸ್ಯನನ್ನಾಗಿ ಮಾಡತಕ್ಕದ್ದು ಅಥವಾ ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ದಿನಾಂಕದಿಂದ ಆರು ತಿಂಗಳೊಳಗೆ ಸಹವರ್ತಿ ಸದಸ್ಯತ್ವದಿಂದ ತೆಗೆದುಹಾಕತಕ್ಕದ್ದು."

**XX XX XX**

**18–ಬಿ ನಿರ್ದೇಶಕತ್ವದ ಸಮಾಪ್ತಿ.–** ಮತ್ತೊಂದು ಸಹಕಾರ ಸಂಘದ ಪ್ರತಿನಿಧಿಯಾಗಿರುವ ದ್ವಿತೀಯ ಸಹಕಾರ ಸಂಘ ಅಥವಾ ಸಂಯುಕ್ತ ಸಂಘ ಅಥವಾ ಅಪೆಕ್ಸ್ ಸಂಘದ ಒಬ್ಬ ನಿರ್ದೇಶಕನು,–

(i) ಆತನು ಪ್ರತಿನಿಧಿಸುವ ಪ್ರಾಥಮಿಕ ಅಥವಾ ದ್ವಿತೀಯ ಸಹಕಾರ ಸಂಘದ ನಿರ್ದೇಶಕನಾಗಿರುವುದು ನಿಂತುಹೋಗಿದ್ದರೆ; ಅಥವಾ

**XX XX XX**

**28ಎ. ಸಹಕಾರ ಸಂಘಗಳ ವ್ಯವಸ್ಥಾಪನೆಯು ಸಮಿತಿಯಲ್ಲಿ ನಿಹಿತವಾಗಿರುವುದು.– XX XX XX**

(2) ಸಹಕಾರ ಸಂಘದ ಸಮಿತಿಯು ಸರ್ಕಾರದಿಂದ ನಾಮನಿರ್ದೇಶಿತರಾದ ವ್ಯಕ್ತಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕರನ್ನು ಹೊರತುಪಡಿಸಿ ಹನ್ನೊಂದಕ್ಕಿಂತ ಕಡಿಮೆ ಇಲ್ಲದ ಆದರೆ ಕೆಳಗೆ ನಿರ್ದಿಷ್ಟಪಡಿಸಿದಷ್ಟು ಸಂಖ್ಯೆಗಿಂತ ಹೆಚ್ಚಿಲ್ಲದ ಸದಸ್ಯರನ್ನು ಒಳಗೊಂಡಿರತಕ್ಕುದು, ಎಂದರೆ:–

(i) ಪ್ರಾಥಮಿಕ ಸಂಘದ ಮತ್ತು ಸೆಕೆಂಡರಿ ಸಂಘದ ಕಾರ್ಯಾಚರಣೆ ಪ್ರದೇಶ ವ್ಯಾಪ್ತಿಯು–

(ಎ) ತಾಲ್ಲೂಕಿನ ಒಂದು ಭಾಗಕ್ಕೆ ವ್ಯಾಪಿಸಿದ್ದರೆ, ಹನ್ನೊಂದು ಸದಸ್ಯರು;

(ಬಿ) ಇಡೀ ತಾಲ್ಲೂಕಿಗೆ ವ್ಯಾಪಿಸಿದ್ದರೆ, ಹದಿಮೂರು ಸದಸ್ಯರು;

(ಸಿ) ತಾಲ್ಲೂಕನ್ನು ಮೀರಿದ ಆದರೆ ಜಿಲ್ಲೆಯನ್ನು ಮೀರದ ಪ್ರದೇಶಕ್ಕೆ ವ್ಯಾಪಿಸಿದ್ದರೆ ಹದಿನೈದು ಸದಸ್ಯರು:

ಪರಂತು, ಒಂದು ಜಿಲ್ಲೆಯನ್ನು ಮೀರದ ಕಾರ್ಯಾಚರಣೆಯ ಪ್ರದೇಶವನ್ನು ಹೊಂದಿರುವ ನಗರ ಸಹಕಾರ ಬ್ಯಾಂಕಿನ ಸಂಬಂಧದಲ್ಲಿ, ಗರಿಷ್ಠ ಸಂಖ್ಯೆಯು ಹದಿನೇಳನ್ನು ಸದಸ್ಯರನ್ನು ಮೀರತಕ್ಕುದಲ್ಲ.

**XX XX XX**

(3) ಪ್ರತಿ ಪ್ರಾಥಮಿಕ ಸಂಘದ ಸಮಿತಿಯಲ್ಲಿ:–

(i) ಒಂದು ಸ್ಥಾನವನ್ನು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಂದ ಚುನಾವಣೆ ಮೂಲಕ ಭರ್ತಿ ಮಾಡುವುದಕ್ಕಾಗಿ;

**XX XX XX**

**63. ಲೆಕ್ಕಪರಿಶೋಧನೆ.–**

**XX XX XX**

(13) ಸಂಘದ ಲೆಕ್ಕಪತ್ರಗಳ ಪುನರ್ ಲೆಕ್ಕಪರಿಶೋಧನೆಯು ಅವಶ್ಯಕ ಅಥವಾ ಯುಕ್ತವೆಂದು ಸಹಕಾರಿ ಸಂಘವು ಸಲ್ಲಿಸಿರುವ ಅರ್ಜಿಯಿಂದ ಅಥವಾ ಅನ್ಯಥಾ ರೀತಿಯಿಂದ ರಾಜ್ಯ ಸರ್ಕಾರಕ್ಕೆ ಕಂಡುಬಂದಲ್ಲಿ, ರಾಜ್ಯ ಸರ್ಕಾರವು, ಆದೇಶದ ಮೂಲಕ ಅಂಥ ಪುನರ್ ಲೆಕ್ಕಪರಿಶೋಧನೆಗೆ ಅವಕಾಶವನ್ನು ಕಲ್ಪಿಸಬಹುದು ಮತ್ತು ಲೆಕ್ಕಪರಿಶೋಧನೆಗೆ ಅನ್ವಯವಾಗುವ ನಿಯಮಗಳೇ ಅಂಥ ಪುನರ್ ಲೆಕ್ಕಪರಿಶೋಧನೆಗೆ ಅವಕಾಶವನ್ನು ಕಲ್ಪಿಸಬಹುದು ಮತ್ತು ಲೆಕ್ಕಪರಿಶೋಧನೆಗೆ ಅನ್ವಯವಾಗುವ ನಿಯಮಗಳೇ ಅಂಥ ಪುನರ್ ಲೆಕ್ಕಪರಿಶೋಧನೆಗೂ ಅನ್ವಯವಾಗತಕ್ಕದ್ದು.

ಪರಂತು ನಿಯಮ ಲೆಕ್ಕಪರಿಶೋಧನೆಯ ಅವಧಿಯಲ್ಲಿ ಲೆಕ್ಕಪರಿಶೋದಕರಿಂದ ಅಥವಾ ಲೆಕ್ಕಪರಿಶೋಧನಾ ಸಂಸ್ಥೆಗಳಿಂದ ಪತ್ತೆಹಚ್ಚಲಾಗದ ಅಥವಾ ಯುಕ್ತವಾಗಿ ಪರೀಕ್ಷೆ ಮಾಡಲಾಗದ, ಮೇಲ್ನೋಟಕ್ಕೆ ವಂಚನೆ ಅಥವಾ ದುರ್ವಿನಿಯೋಗ ಅಥವಾ ಅಪರಾಧಿತ ದುರ್ವಿನಿಯೋಗವೆಂದು ಕಂಡುಬರುವ ಸಂದರ್ಭದಲ್ಲಿ ಅಥವಾ ಲೆಕ್ಕಪತ್ರಗಳೆಂದು

ಕಂಡುಬರುವ ಸಂದರ್ಭದಲ್ಲಿ ಅಥವಾ ಲೆಕ್ಕಪತ್ರಗಳ ತಪ್ಪು ವರ್ಗೀಕರಣವಾಗಿದೆ ಎಂಬ ಸಂಧರ್ಭದಲ್ಲಿ ಅಥವಾ ಸಂಘದ ಹಣಕಾಸು ಸ್ಥಿತಿಗತಿಯನ್ನು ವಾಸ್ತವವಾಗಿ ಪ್ರತಿಬಿಂಬಸುವಂಥ ಯಾವುದೇ ಇತರ ಯುಕ್ತ ಕಾರಣಗಳ ಸಂದರ್ಭದಲ್ಲಿ ಮಾತ್ರ ಅಂಥ ಪುನರ ಲೆಕ್ಕಪರಿಶೋಧನೆಗೆ ಆದೇಶಿಸತಕ್ಕದ್ದು.

(13ಎ) ಹಿಂದಿನ ಉಪಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಸಹಕಾರಿ ಸಂಘದ ಲೆಕ್ಕಪರಿಶೋಧನೆಯ ನಿರ್ದೇಶಕನು, ರಾಜ್ಯ ಸರ್ಕಾರದ ಅನುಮೋದನೆಗೆ ಒಳಪಟ್ಟು, ಹಿಂದಿನ ಮೂರು ವರ್ಷಗಳಿಗೆ ಸಂಬಂಧಿಸಿದ ಯಾವುದೇ ಸಹಕಾರ ಸಂಘದ ಲೆಕ್ಕಪರಿಶೋಧಿತ ನಿರ್ದಿಷ್ಟ ಲೆಕ್ಕಪತ್ರವನ್ನು ಅಥವಾ ಲೆಕ್ಕಪತ್ರಗಳನ್ನು ಪುನರ್‌ಪರಿಶೀಲಿಸಲು ಅಥವಾ ಪುನರ್‌ಸತ್ಯಾಪನೆ ಮಾಡಲು ಮತ್ತು ಅಂಥ ಪುನರ್‌ಪರಿಶೀಲನೆ ಅಥವಾ ಪುನರ್‌ಸತ್ಯಾಪನೆಯ ಅವಧಿಯಲ್ಲಿ ಗಮನಿಸಲಾದ ಲೋಪಗಳನ್ನು, ಹೊರಡಿಸಬೇಕಾದ ಮುಂದಿನ ಲೆಕ್ಕಪರಿಶೋಧನಾ ವರದಿಯಲ್ಲಿ ಸರಿಪಡಿಸಿಕೊಳ್ಳುವಂತೆ ಸಂಬಂಧಪಟ್ಟ ಲೆಕ್ಕಪರಿಶೋಧಕನಿಗೆ ತಿಳಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**XX XX XX**

**70. ತೀರ್ಮಾನಕ್ಕಾಗಿ ರಿಜಿಸ್ಟ್ರಾರನಿಗೆ ಉಲ್ಲೇಖಿಸಬಹುದಾದ ವಿವಾದಗಳು.– XX XX XX**

(2) (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ ಈ ಕೆಳಕಂಡ ವಿವಾದಗಳನ್ನು ಸಹಕಾರ ಸಂಘದ ರಚನೆ, ವ್ಯವಸ್ಥಾಪನೆ ಅಥವಾ ವ್ಯವಹಾರಕ್ಕೆ ಸಂಬಂಧಪಟ್ಟ ವಿವಾದಗಳೆಂದು ಭಾವಿಸತಕ್ಕದು, ಎಂದರೆ:–

(ಎ) ಸಂಘವು, ಸದಸ್ಯನಿಂದ ಅಥವಾ ಮೃತ ಸದಸ್ಯನ ನಾಮನಿರ್ದೇಶಿತನಿಂದ, ವಾರಸುದಾರರಿಂದ ಅಥವಾ ಕಾನೂನು ಸಮ್ಮತ ಪ್ರತಿನಿಧಿಗಳಿಂದ ತನಗೆ ಬರಬೇಕಾದ ಯಾವುದೇ ಋಣ ಅಥವಾ ತಗಾದೆಯ ಬಗ್ಗೆ ಮಾಡಿದ ಕ್ಲೇಮು, ಅಂಥ ಋಣ ಅಥವಾ ತಗಾದೆಯು ಅಂಗೀಕೃತವಾಗಿರಲಿ ಅಥವಾ ಇಲ್ಲದಿರಲಿ;

(ಬಿ) ಸಂಘವು, ಪ್ರಧಾನ ಋಣಿಯ ತಪ್ಪಿನ ಪರಿಣಾಮವಾಗಿ ಅಂಥ ಋಣ ಅಂಗೀಕೃತವಾಗಿರಲಿ ಅಥವಾ ಇಲ್ಲದಿರಲಿ, ಪ್ರಧಾನ ಋಣಿಯಿಂದ ತನಗೆ ಬಾಕಿ ಇರುವ ಯಾವುದೇ ಋಣ ಅಥವಾ ತಗಾದೆಯ ಸಂಬಂಧದಲ್ಲಿ ಯಾವುದೇ ಮೊಬಲಗನ್ನು ಜಾಮೀನುದಾರರಿಂದ ವಸೂಲು ಮಾಡಿರುವಲ್ಲಿ, ಆ ಪ್ರಧಾನ ಋಣಿಯ ವಿರುದ್ಧ ಜಮೀನುದಾರನು ಮಾಡಿದ ಕ್ಲೇಮು;

**XX XX XX**

**108. ರಾಜ್ಯಸರ್ಕಾರದ ಪುನರೀಕ್ಷಣೆಯ ಅಧಿಕಾರಗಳು.–** 108ಎ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ರಾಜ್ಯ ಸರ್ಕಾರವು ಸ್ವಪ್ರೇರಣೆಯಿಂದ ಯಾವುದೇ ಕಾಲಕ್ಕೆ, ಮತ್ತು ಯಾವುದೇ ಆದೇಶದ ದಿನಾಂಕದಿಂದ ಆರು ತಿಂಗಳೊಳಗಾಗಿ, ಬಾಧಿತನಾದ ಯಾರೇ ವ್ಯಕ್ತಿಯು ಅರ್ಜಿ ಸಲ್ಲಿಸಿದ ಮೇಲೆ, ತನಗೆ ಅಧೀನವಾದ ಯಾರೇ ಅಧಿಕಾರಿಯ ಯಾವುದೇ ಪ್ರಕರಣದ ಅಥವಾ ವ್ಯವಹರಣೆಗಳ ದಾಖಲೆಗಳನ್ನು, ನ್ಯಾಯಾಧಿಕರಣಕ್ಕೆ ಮಾಡಲಾದ ಅಪೀಲಿಗೆ ಅಥವಾ ಅದರ ಪುನರೀಕ್ಷಣೆಗೆ ಒಳಪಟ್ಟವುಗಳನ್ನು ಅಥವಾ 106ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಅಥವಾ ಇತರ ಪ್ರಾಧಿಕಾರಗಳಿಗೆ ಸಲ್ಲಿಸಿದ ಅಪೀಲಿಗೆ ಸಂಬಂಧಿಸಿದವುಗಳನ್ನು ಹೊರತುಪಡಿಸಿ, ತರಿಸಿಕೊಳ್ಳಬಹುದು ಮತ್ತು ಪರೀಕ್ಷಿಸಬಹುದು; ಮತ್ತು ರಾಜ್ಯ ಸರ್ಕಾರಕ್ಕೆ ತನಗೆ ಯೋಗ್ಯವೆನಿಸುವಂಥ ತನಿಖೆ ನಡೆಸಿದ ತರುವಾಯ ಅಧಿಕಾರಿಯ ಆದೇಶವು ಕಾನೂನು ವಿರುದ್ಧವಾಗಿದೆಯೆಂದು ಮತ್ತು ನ್ಯಾಯ ವೈಫಲ್ಯದಲ್ಲಿ ಪರಿಣಮಿಸಿದೆಯೆಂದು ಮನದಟ್ಟಾದರೆ, ಅದರ ಮೇಲೆ ರಾಜ್ಯ ಸರ್ಕಾರವು ತನಗೆ ನ್ಯಾಯವೆಂದೆನಿಸುವಂಥ ಆದೇಶ ಮಾಡಬಹುದು:

**XX XX XX**

**132. ತೊಂದರೆಗಳನ್ನು ನಿವಾರಿಸುವ ಅಧಿಕಾರ.–** (1) ಈ ಅಧಿನಿಯಮದ ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ಅಧಿನಿಯಮಗಳ ಉಪಬಂಧಗಳಿಂದ ಈ ಅಧಿನಿಯಮದ ಉಪಬಂಧಗಳಿಗೆ ಪರಿವರ್ತನೆಯಾದ ಪರಿಣಾಮವಾಗಿ, ಸದರಿ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ, ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಆ ತೊಂದರೆಯನ್ನು ನಿವಾರಿಸುವುದಕ್ಕಾಗಿ ತನಗೆ ಅವಶ್ಯವೆಂದು ಅಥವಾ ಯುಕ್ತವೆಂದು ಕಂಡುಬರುವಂಥ ಉಪಬಂಧಗಳನ್ನು ಮಾಡಬಹುದು.

(2) ಈ ಅಧಿನಿಯಮದ ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ಅಧಿನಿಯಮಗಳ ಉಫಬಂಧಗಳ ಪರಿವರ್ತನೆಗೆ ಸಂಬಂಧಿಸಿದುದನ್ನು ಬಿಟ್ಟು ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಆ ತೊಂದರೆಯನ್ನು ನಿವಾರಿಸಲು ಅವಶ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರುವಂಥ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರುವಂಥ ಉಪಬಂಧಗಳನ್ನು ರಚಿಸಬಹುದು.

**XX XX XX**

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**NINTH SESSION**
**(ADJOURNED MEETINGS)**

# THE KARNATAKA CO-OPERATIVE SOCIETIES (AMENDMENT) BILL, 2016

**(L.A. Bill No. 17 of 2016)**

A Bill further to amend the Karnataka Cooperative Societies Act, 1959.

Whereas it is expedient further to amend the Karnataka Cooperative Societies Act, 1959 (Karnataka Act No 11 of 1959) for the purposes hereinafter appearing;

Be it enacted by the Karnataka State Legislature in the sixty seventh year of the Republic of India as follows:-

**1. Short title and commencement.-** (1) This Act may be called the Karnataka Cooperative Societies (Amendment) Act, 2016.

(2) It shall come into force at once.

**2. Amendment of section 12.-** In section 12 of the Karnataka Cooperative Societies Act, 1959 (Karnataka Act No. 11 of 1959) (hereinafter referred to as the principal Act), in sub-section (5), the words "in the interest of such society or" shall be omitted.

**3. Amendment of section 18.-** In section 18 of the Principal Act, in sub-section (1), for the proviso the following shall be substituted with effect from 6.9.2014, namely:-

"Provided that on or after the Karnataka Co-operative Societies (Amendment) Act, 2014 the number of associate members under clause (a) in any co-operative society except employees cooperative society shall not exceed fifteen percent of the total regular membership."

**4. Amendment of section 18B.-** In section 18B of the Principal Act, after clause(i) the following shall be inserted namely:-

"in case of amalgamation or re-organization or division of Co-operative Societies he may continue to represent such society until such amalgamated, reorganized or divided Society withdraws his representation by resolution."

**5. Amendment of section 28A.-** In section 28A of the Principal Act,-

(1) in sub-section (2),-

(i) for the words, "not less than eleven", the word, " not less than thirteen" shall be substituted;

(ii) in clause (i),-

(a) in item (a), for the word "eleven", the word "thirteen" shall be substituted;

(b) in item (b), for the words "thirteen ", the words "fifteen" shall be substituted; and

(c) in item (c), for the word "fifteen", the word "seventeen" shall be substituted.

(2) in sub-section (3), for clause (i) the following shall be substituted, namely:-

"(i) one seat to be filled by election, in favour of the person belonging to the Scheduled Castes and one seat to be filled by election, in favour of the person belonging to the Scheduled Tribes;

**6. Insertion of new section 29H.-** After section 29G of the Principal Act, the following shall be inserted, namely:-

"**29H. Motion of no-confidence against office-bearer.-** (1) A motion of no confidence against an office bearer may be moved only after two years of his assumption of office. In case, the motion of no confidence is once defeated, a fresh motion shall not be introduced within one year thereafter. No motion of no confidence shall be moved unless there is a request from not less than one-third of the elected members of the board of a Co-operative Society concerned.

(2) An office bearer of a Co-operative Society shall be deemed to have vacated his office forthwith if a resolution expressing want of confidence in him is passed by a majority of two third of the total number of elected directors of a Co-operative Society at a meeting specially convened for the purpose.

(3) The procedure for no confidence motion shall be as prescribed. "

**7. Amendment of section 63.-** In section 63 of the Principal Act,-

(i) in sub-section (13), the following shall be inserted at the end, namely:-

"The result of the re-audit shall be incorporated by the co-
Operative society in the next audit report to be issued."

(ii) in sub-section (13-A) for the words "three years" , the words "five years" shall be substituted.

**8. Amendment of section 70.-** In section 70 of the Principal Act, in sub-section (2), after clause (b), the following shall be inserted, namely:-

"(c) any dispute arising in connection with the election of a President, Vice-President or any office-bearer or Member of board of the society."

**9. Amendment of section 108.-** In section 108 of the Principal Act, for the words, "an appeal has been made to" the words "an appeal as been made and pending before" shall be substituted.

**10. Substitution of Section 132.** – For section 132 of the principal Act, the following shall be substituted, namely:-

**"132. Power to remove difficulties.**– If any difficulty arises in giving effect to the provisions of this Act, the State Government may, by notification in official Gazette, make such provisions not inconsistent with the provisions of this Act, as appear to it to be necessary or expedient for removing of difficulty."

**STATEMENT OF OBJECTS AND REASONS**

It is considered necessary to amend the Karnataka Co-operative Societies Act, 1959 to provide for,-

(i) enhancement of the maximum number of members of Board co-operative societies to accommodate separate membership for persons belonging to the Scheduled Castes or Scheduled Tribes;

(ii) continuation of Directorship of primary society in Apex/ Federal society till their membership is withdrawn by resolution by the amalgamated or divided or reconstituted society;

(iii) motion of no confidence against office bearer in cooperative societies;

(iv) clarity regarding the powers of the State Government in respect of revision petitions;

(v) removal of difficulty in bringing the provisions of the Act into force; and

(vi) certain consequential amendments are also made.

Hence the Bill

**FINANCIAL MEMORANDUM**

There is no extra expenditure involved in the proposed Legislative measure.

**H.S MAHADEVA PRASAD**
Minister for Co-operation and Sugar

**S.Murthy**
Secretary (I/C)
Karnataka Legislative Assembly

**ANNEXURE**

**Extract from the Karnataka Co-operative Societies Act, 1959 (Karnataka Act No. 11 of 1959)**

XX XX XX

**12. Amendment of bye-laws of a co-operative society.-** XX XX XX

(5) If it appears to the Registrar that any amendment of the byelaws of a Co-operative Society is necessary or desirable in the interest of such society or to give effect to the provisions of the Act made thereunder, the Registrar may, by order, may direct the Co-operative Society, to make Co-operative Societies 43 the amendment proposed by him in such manner as may be prescribed and within such time as he may specify.

XX XX XX

**18. Nominal or associate members**.- XX XX XX

“Provided that the number of associate members under clause (a) in any Co-operative Society shall not exceed fifteen percent of the total membership of the society. However, in case of Co-operative Societies already having more than fifteen percent of their total membership as associate members, the excess associate members shall be either made as member, if eligible under the section 16 or shall be removed from the associate membership within six months from the date of commencement of the Karnataka Co-operative Societies (Amendment) Act, 2014."

XX XX XX

**18-B. Cessation of directorship.-** XX XX XX

(i) he ceases to be a director of the primary or secondary Cooperative Society which he represents; or

XX XX XX

